ಪರಮದಯಾಮಯು ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಅಲ್ಲಾಹನ ವತಿಯಿಂದ ಜಗತ್ತಿಗೆ ನೇಮಕಗೊಂಡ ಎಲ್ಲ ಪ್ರವಾದಿಗಳನ್ನು ಮುಸ್ಲಿಮರು ನಂಬುತ್ತಾರೆ. ಪ್ರಥಮ ಮಾನವ ಮತ್ತು ಮೊದಲ ಪ್ರವಾದಿ ಆದಮ್(ಅ) ಅವರಿಂದ ಹಿಡಿದು ಅಂತಿಮ ಪ್ರವಾದಿ ಮುಹಮ್ಮದ್(ಸ) ಅವರ ತನಕ ಭೂಮುಖದ ಮೇಲೆ ಬಂದ ಎಲ್ಲ ಪ್ರವಾದಿಗಳನ್ನು ನಂಬುವುದು ಅವರ ಧಾರ್ಮಿಕ ವಿಶ್ವಾಸದ ಮೂಲಭೂತ ಅಂಶಗಳಲ್ಲೊಂದು.

ಯೇಸು ಅಥವಾ ಪ್ರವಾದಿ ಈಸಾ(ಅ) ಅಲ್ಲಾಹನ ಪ್ರವಾದಿಗಳ ಪೈಕಿ ಓರ್ವ ಮಹಾನ್ ಪ್ರವಾದಿಯಾಗಿದ್ದಾರೆ. ಈ ಜಗತ್ತಿಗೆ ಬಂದ ಸುಮಾರು ಒಂದೂಕಾಲು ಲಕ್ಷ ಪ್ರವಾದಿಗಳ ಪೈಕಿ ಪವಿತ್ರ ಕುರ್‌ಆನ್ ಕೇವಲ 25 ಮಂದಿ ಪ್ರವಾದಿಗಳನ್ನು ಹೆಸರಿಸಿದೆ. ಆ ಪೈಕಿ ಐದು ಮಂದಿಯನ್ನು ಅದು ಮಹಾನ್ ಪ್ರವಾದಿಗಳೆಂದು ಸಾರಿದೆ. ಆ ಐದು ಮಂದಿ ಮಹಾನ್ ಪ್ರವಾದಿಗಳಲ್ಲಿ ಪ್ರವಾದಿ ಈಸಾ(ಅ) ಅವರೂ ಒಬ್ಬರಾಗಿದ್ದಾರೆ. ಅವರನ್ನು ಅಲ್ಲಾಹನ ಸಂದೇಶವಾಹಕರೆಂದು ನಂಬದವನು ಮುಸ್ಲಿಮ್ ಎಂದು ಪರಿಗಣಿಸಲ್ಪಡಲಾರ. ಅವರ ಪ್ರವಾದಿತ್ವವನ್ನು ನಿರಾಕರಿಸುವವನು ಇಸ್ಲಾಮ್ ಧರ್ಮದಿಂದ ಭ್ರಷ್ಟನಾಗುತ್ತಾನೆ.

ಪವಿತ್ರ ಕುರ್‌ಆನಿನಲ್ಲಿ ಹೆಸರಿನೊಂದಿಗೆ ಪ್ರಸ್ತಾಪಿಸಲ್ಪಟ್ಟಿರುವಂತಹ ಏಕೈಕ ಮಹಿಳೆ ಯೇಸುವಿನ ತಾಯಿ ಮೇರಿ ಅಥವಾ ಮರ್ಯಮ್(ಅ) ಆಗಿರುವರು. ಅವರ ಚಾರಿತ್ರ್ಯವನ್ನು ಪವಿತ್ರ ಕುರ್‌ಆನ್ ಒಂದು ಆದರ್ಶವಾಗಿ ಜಗತ್ತಿನ ಮುಂದಿರಿಸಿದೆ.

ಈ ಪುಸ್ತಕದಲ್ಲಿ ಯೇಸು ಮತ್ತು ಮೇರಿಯವರ ಕುರಿತು ಕುರ್‌ಆನಿನ ದೃಷ್ಟಿಕೋನವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಲಾಗಿದೆ.

ನಮ್ಮ ಕ್ರೈಸ್ತ ಬಂಧುಗಳಿಗೆ ಇದು ಒಂದು ಉತ್ತಮ ಉಡುಗೊರೆಯಾಗಿದೆ. ಇದನ್ನು ಕನ್ನಡಿಗರಾದ ಕ್ರೈಸ್ತ ಬಾಂಧವರಿಗೆ ತಲುಪಿಸುವುದು ಪ್ರತಿಯೊಬ್ಬ ಮುಸ್ಲಿಮನ ಹೊಣೆಯಾಗಿದೆ.

ಇಸ್ಲಾಮ್ ಮತ್ತು ಕುರ್‌ಆನಿನ ಕುರಿತು ಕ್ರೈಸ್ತ ಬಂಧುಗಳಲ್ಲಿರಬಹುದಾದ ತಪ್ಪು ಕಲ್ಪನೆಗಳನ್ನು ನೀಗಿಸಲು ಇದು ಸಹಕಾರಿಯಾದೀತು. ಜತೆಗೆ ಪ್ರವಾದಿ ಈಸಾ(ಅ) ಮತ್ತು ಮರ್ಯಮ್(ಅ) ಅವರ ಕುರಿತು ಕುರ್‌ಆನಿನ ನಿಲುವು ಅವರಿಗೆ ಸ್ಪಷ್ಟವಾದೀತು.

ಈ ಪುಸ್ತಕದುದ್ದಕ್ಕೂ ಯೇಸು ಅಥವಾ ಪ್ರವಾದಿ ಈಸಾ ಮತ್ತು ಮೇರಿ ಅಥವಾ ಮರ್ಯಮರ ಉಲ್ಲೇಖ ಬಂದಾಗಲೆಲ್ಲಾ '(ಅ)' ಎಂಬ ಸಂಕೇತವನ್ನು ಕೊಡಲಾಗಿದೆ. ಅದು 'ಅಲೈಹಿಸ್ಸಲಾಮ್' ಎಂಬುದರ ಸಂಕ್ಷೇಪ. 'ಅವರ ಮೇಲೆ ಶಾಂತಿಯಿರಲಿ' ಎಂದು ಅದರ ಅರ್ಥ. ಪ್ರವಾದಿಗಳ ಹೆಸರಿನ ಜತೆಗೆ ಹಾಗೆ ಹೇಳಬೇಕೆಂಬುದು ಇಸ್ಲಾಮ್ ಕಲಿಸುವ ಶಿಷ್ಟಾಚಾರವಾಗಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕ

# ಮರ್ಯಮ್‌(ಅ) ತಾಯಿಯ ಹರಕೆ

ಪವಿತ್ರ ಕುರ್‌ಆನಿನ ಮೂರನೆಯ ಅಧ್ಯಾಯದ ಹೆಸರು 'ಇಮ್ರಾನನ ಸಂತತಿ' ಎಂದಾಗಿದೆ. ಇಮ್ರಾನ್ ಎಂಬುದು ಪ್ರವಾದಿ ಮೂಸಾ ಮತ್ತು ಹಾರೂನ್(ಅ) ಅವರ ತಂದೆಯ ಹೆಸರು. ಅವರನ್ನು ಬೈಬಲ್‌ನಲ್ಲಿ 'ಅಮ್ರಾಮ್' ಎಂದು ಹೆಸರಿಸಲಾಗಿದೆ. ಕುರ್‌ಆನಿನ 'ಆಲಿ ಇಮ್ರಾನ್' ಎಂಬ ಅಧ್ಯಾಯದಲ್ಲಿ ಪ್ರವಾದಿ ಈಸಾ(ಅ) ಅವರ ತಾಯಿಯಾದ ಮರ್ಯಮ್(ಅ) ಅವರ ಪ್ರಸ್ತಾಪ ಈ ರೀತಿ ಬಂದಿದೆ:

"ಅಲ್ಲಾಹನು ಆದಮ್, ನೂಹ್, ಇಬ್ರಾಹೀಮ್‌ರ ವಂಶ ಮತ್ತು ಇಮ್‌ರಾನರ ವಂಶಗಳನ್ನು ಸಕಲ ಜಗತ್ತಿನವರ ಮೇಲೆ ಮಹತ್ವ ನೀಡಿ (ತನ್ನ ಸಂದೇಶವಾಹಕತ್ವಕ್ಕಾಗಿ) ಆಯ್ದುಕೊಂಡಿದ್ದನು. ಇವರು ಪರಸ್ಪರರ ವಂಶದವರೂ ಒಂದೇ ಪರಂಪರೆಯವರೂ ಆಗಿದ್ದರು. ಅಲ್ಲಾಹ್ ಎಲ್ಲವನ್ನೂ ಆಲಿಸುತ್ತಾನೆ ಮತ್ತು ಅರಿಯುತ್ತಾನೆ. ಇಮ್‌ರಾನನ ಸ್ತ್ರೀಯು, ಓ ನನ್ನ ಪ್ರಭೂ, ನಾನು ನನ್ನ ಗರ್ಭದಲ್ಲಿರುವ ಶಿಶುವನ್ನು ನಿನಗೆ ಹರಕೆಯಾಗಿ ಒಪ್ಪಿಸುತ್ತೇನೆ. ಅದು ನಿನ್ನ ಕಾರ್ಯಕ್ಕಾಗಿಯೇ ಸಮರ್ಪಿತವಿರುವುದು. ನನ್ನ ಈ ಕಾಣಿಕೆಯನ್ನು ಸ್ವೀಕರಿಸು. ನಿಶ್ಚಯವಾಗಿಯೂ ನೀನು ಸರ್ವ ಶ್ರುತನೂ ಸರ್ವಜ್ಞನೂ ಆಗಿರುವೆ, ಎಂದು ಹೇಳುತ್ತಿದ್ದಳು. (ಆಗ ಅವನು ಅದನ್ನು ಆಲಿಸುತ್ತಿದ್ದನು) ಅನಂತರ ಅವಳಲ್ಲಿ ಆ ಹೆಣ್ಣು ಶಿಶು ಜನಿಸಿದಾಗ ಅವಳು, ಓ ನನ್ನ ಪ್ರಭೂ, ನನ್ನಲ್ಲಿ ಹೆಣ್ಣು ಶಿಶು ಜನಿಸಿ ಬಿಟ್ಟಿದೆ ಎಂದಳು- ವಸ್ತುತಃ ಅವಳು ಏನು ಪಡೆದಿದ್ದಳೆಂಬುದರ ಸಮಾಚಾರ ಅಲ್ಲಾಹನಿಗೆ ತಿಳಿದಿತ್ತು ಮತ್ತು ಗಂಡು ಶಿಶು ಹೆಣ್ಣು ಶಿಶುವಿನಂತಿರುವುದಿಲ್ಲ. ಸರಿ, ನಾನು ಅದಕ್ಕೆ ಮರ್ಯಮ್ ಎಂದು ನಾಮಕರಣ ಮಾಡಿಬಿಟ್ಟೆ ಮತ್ತು ನಾನು ಆಕೆಯನ್ನು ಆಕೆಯ ಭಾವೀ ಸಂತತಿಯನ್ನೂ ಬಹಿಷ್ಕೃತ ಶೈತಾನನ ಕೇಡಿನಿಂದ (ತಪ್ಪಿಸಲು) ನಿನ್ನ ರಕ್ಷಣೆಗೆ ಒಪ್ಪಿಸುತ್ತೇನೆ ಎಂದು ಹೇಳಿದಳು. ಕೊನೆಗೆ ಅವಳ ಪ್ರಭುವು ಆ ಬಾಲಕಿಯನ್ನು ಸಂತೋಷದಿಂದ ಸ್ವೀಕರಿಸಿಕೊಂಡನು. ಅವಳನ್ನು ಅತ್ಯುತ್ತಮ ಬಾಲಕಿಯನ್ನಾಗಿ ಬೆಳೆಸಿದನು ಮತ್ತು ಝುಕರಿಯ್ಯಾರನ್ನು ಅವಳ ರಕ್ಷಕನನ್ನಾಗಿ ಮಾಡಿದನು. ಝುಕರಿಯ್ಯಾರವರು ಅವಳ ಕೊಠಡಿಗೆ ಬಂದಾಗ ಲೆಲ್ಲಾ ಅವಳ ಬಳಿ ಒಂದಲ್ಲೊಂದು ಭಕ್ಷ್ಯ ಪದಾರ್ಥವನ್ನು ಕಂಡು, 'ಓ ಮರ್ಯಮ್, ಇದು ನಿನ್ನ ಬಳಿಗೆ ಎಲ್ಲಿಂದ ಬಂತು?' ಎಂದು ಕೇಳುತ್ತಿದ್ದರು. ಆಗ ಅವಳು, 'ಅದು ಅಲ್ಲಾಹನ ಕಡೆಯಿಂದ ಬಂದಿದೆ. ಅಲ್ಲಾಹ್ ತನಗಿಷ್ಟವುಳ್ಳವರಿಗೆ ಎಣಿಸಲಾಗದಷ್ಟು ಅನ್ನಾಧಾರ ನೀಡುತ್ತಾನೆ' ಎಂದು ಉತ್ತರಿಸುತ್ತಿದ್ದಳು." (3:33-37)

ಕ್ರೈಸ್ತರು ಹಝ್ರತ್ ಈಸಾರನ್ನು(ಅ) ಅಲ್ಲಾಹನ ದಾಸ ಮತ್ತು ಸಂದೇಶವಾಹಕರು ಎಂದು ನಂಬುವ ಬದಲು ಅವರನ್ನು ಅಲ್ಲಾಹನ ಮಗನೆಂದು ನಂಬುತ್ತಾರೆ. ಅಲ್ಲಾಹನ ದೇವತ್ವದಲ್ಲಿ ಹ.ಈಸಾರೂ(ಅ) ಭಾಗೀದಾರರಾಗಿದ್ದಾರೆಂದು ಹೇಳುತ್ತಾರೆ. ಪವಿತ್ರ ಕುರ್‌ಆನಿನ ದೃಷ್ಟಿಯಲ್ಲಿ ಇದುವೇ ಅವರ ಪಥಭ್ರಷ್ಟತೆಯ ಮುಖ್ಯ ಕಾರಣ. ಅವರ ಈ ಮೂಲಭೂತ ತಪ್ಪುಕಲ್ಪನೆಯು ನಿವಾರಣೆಯಾದರೆ ಅಲ್ಲಾಹನ ನೈಜ ಧರ್ಮದ ಪರಿಚಯ ಅವರಿಗಾಗುವುದು. (ಕಡೆಗೆ ಅವರ ಮರಳುವಿಕೆ ಸುಲಭವಾಗುವುದು.) ಆದ್ದರಿಂದಲೇ ಮೇಲಿನ ಸೂಕ್ತದಲ್ಲಿ ಆದಮ್, ನೂಹ್, ಇಬ್ರಾಹೀಮರ ಸಂತತಿ ಮತ್ತು ಇಮ್ರಾನನ ಸಂತತಿ ಎಲ್ಲರೂ ಅಲ್ಲಾಹನ ಪ್ರವಾದಿಗಳಾಗಿದ್ದರು ಎಂದು ಸಾರಲಾಗಿದೆ. ಅವರೆಲ್ಲರೂ ಒಬ್ಬರ ಸಂತತಿಯಲ್ಲಿ ಇನ್ನೊಬ್ಬರು ಹುಟ್ಟುತ್ತಾ ಬಂದರು. ಅವರ ಪೈಕಿ ಯಾರೂ ದೇವರಲ್ಲ. ಅಲ್ಲಾಹನು ತನ್ನ ಧರ್ಮದ ಪ್ರಚಾರ ಮತ್ತು ಲೋಕದ ಸುಧಾರಣೆಗಾಗಿ ಅವರನ್ನು ಆರಿಸಿಕೊಂಡಿರುವುದು ಮಾತ್ರ ಅವರ ವೈಶಿಷ್ಟ್ಯವಾಗಿದೆ.

ಹ.ಮರ್ಯಮರು(ಅ) ಬೆಳೆದು ದೊಡ್ಡವರಾದಾಗ ಅವರ ತಾಯಿಯ ಹರಕೆಯಂತೆ ಅವರನ್ನು ಬೈತುಲ್ ಮಕ್ದಿಸ್‌ನ ಆರಾಧನಾಲಯದಲ್ಲಿ ಸೇರಿಸಲಾಯಿತು. ಆ ಆರಾಧನಾಲಯವನ್ನು 'ಹೈಕಲ್ ಸುಲೈಮಾನಿ' ಎನ್ನಲಾಗುತ್ತದೆ. ಅಲ್ಲಿ ಹ.ಮರ್ಯಮ್(ಅ) ರಾತ್ರಿ ಹಗಲು ಅಲ್ಲಾಹನ ಧ್ಯಾನದಲ್ಲಿ ನಿರತರಾಗಿರುತ್ತಿದ್ದರು. ಅವರನ್ನು ಝಕರಿಯ್ಯಾರ(ರ) ಸಂರಕ್ಷಣೆಯಲ್ಲಿ ಒಪ್ಪಿಸಲಾಗಿತ್ತು. ಝಕರಿಯ್ಯಾ ಮರ್ಯಮ್‌ರ(ಅ) ಚಿಕ್ಕಪ್ಪನಾಗಿದ್ದು ಹೈಕಲ್‌ನ ಅರ್ಚಕರಾಗಿದ್ದರು. ಇದು ಬೈಬಲ್‌ನ ಹಳೆಯ ಒಡಂಬಡಿಕೆಯಲ್ಲಿ ಪ್ರಸ್ತಾಪವಿರುವ ಹತ್ಯೆಗೀಡಾದ ಪ್ರವಾದಿ ಝಕರಿಯ್ಯಾ(ಅ) ಅಲ್ಲ.

## ಮರ್ಯಮರ(ಅ) ಶ್ರೇಷ್ಠತೆ

ಮರ್ಯಮರ(ಅ) ಶ್ರೇಷ್ಠತೆಯ ಕುರಿತು ಪವಿತ್ರ ಕುರ್‌ಆನ್ ಈ ರೀತಿ ಹೇಳಿದೆ:

**"ಅನಂತರ ದೇವಚರರು ಮರ್ಯಮರ ಬಳಿಗೆ ಬಂದು (ಹೀಗೆ) ಹೇಳಿದ ಸಂದರ್ಭ ಬಂತು- ಓ ಮರ್ಯಮ್, ಅಲ್ಲಾಹನು ನಿನ್ನನ್ನು ಪುನೀತಳನ್ನಾಗಿ ಮಾಡಿದನು ಮತ್ತು ನಿನಗೆ ಪರಿಶುದ್ಧತೆ ನೀಡಿದನು ಮತ್ತು ಸಮಸ್ತ ಲೋಕದ ಸ್ತ್ರೀಯರ ಮೇಲೆ ನಿನಗೆ ಶ್ರೇಷ್ಠತೆ ದಯಪಾಲಿಸಿ ತನ್ನ ಸೇವೆಗಾಗಿ ಆಯ್ದುಕೊಂಡನು. ಓ ಮರ್ಯಮ್, ನಿನ್ನ ಪ್ರಭುವಿನ ಆಜ್ಞಾಪಾಲಕಿಯಾಗಿರು, ಅವನ ಮುಂದೆ ಸಾಷ್ಟಾಂಗವೆರಗು, ಅವನ ಮುಂದೆ ಬಾಗುವವರೊಂದಿಗೆ ನೀನೂ ಬಾಗು." (3:42-43)**

ಹ.ಮರ್ಯಮರಿಗೆ(ಅ) ಅಲ್ಲಾಹನ ವತಿಯಿಂದ ಲಭಿಸಿದ ಈ ಶ್ರೇಷ್ಠತೆಯನ್ನು ಕಂಡು ಹ.ಝಕರಿಯ್ಯಾರೂ(ಅ) ತನಗೋರ್ವ ಸಜ್ಜನ ಪುತ್ರನನ್ನು ದಯಪಾಲಿಸು ಎಂದು ಅಲ್ಲಾಹನಲ್ಲಿ ಪ್ರಾರ್ಥಿಸುತ್ತಾರೆ. ಹ.ಝಕರಿಯ್ಯಾರು(ಅ) ಆಗ ವಯೋವೃದ್ಧರಾಗಿದ್ದರು ಮತ್ತು ಅವರ ಪತ್ನಿ ಬಂಜೆಯಾಗಿದ್ದರು. ಓರ್ವ ಯುವತಿಯಾದ ದೇವಭಕ್ತೆಳಿಗೆ ಅಲ್ಲಾಹನು ತನ್ನ ಮಹಿಮೆಯಿಂದ ಆಹಾರ ಒದಗಿಸುವಾಗ ತಮ್ಮ ಈ ಮುದಿತನ ಮತ್ತು ಪತ್ನಿಯ

ಬಂಜೆತನದ ಹೊರತಾಗಿಯೂ ಅಲ್ಲಾಹನು ತನಗೆ ಸಂತಾನವನ್ನು ದಯಪಾಲಿಸಬಲ್ಲನೆಂಬ ನಂಬಿಕೆ ಅವರಲ್ಲಿ ಮೂಡಿತ್ತು. ಅಲ್ಲಾಹನು ಅವರ ಈ ಭರವಸೆಯನ್ನು ಹುಸಿಗೊಳಿಸಲಿಲ್ಲ. ಅವರಿಗೆ ಯಹ್ಯಾ ಎಂಬ ಹೆಸರಿನ ಓರ್ವ ಪುತ್ರನನ್ನು ದಯಪಾಲಿಸಿದನು. ಬೈಬಲ್‌ನಲ್ಲಿ ಅವರನ್ನು 'ಜಾನ್ ದಿ ಬ್ಯಾಪ್ಟಿಸ್ಟ್' ಎಂದು ಕರೆಯಲಾಗಿದೆ.

ಈ ರೀತಿ ಮುದಿ ಪ್ರಾಯದ ಪುರುಷ ಮತ್ತು ಬಂಜೆ ಪತ್ನಿಯಿಂದ ಅಲ್ಲಾಹನು ಹ.ಯಹ್ಯಾರನ್ನು(ಅ) ಹುಟ್ಟಿಸಿರುವಾಗ ಮತ್ತು ಈ ಪವಾಡವು ಪ್ರವಾದಿ ಈಸಾರ(ಅ) ಜನನದ ಕೇವಲ ಆರು ತಿಂಗಳ ಮುಂಚೆ ಸಂಭವಿಸಿರುವಾಗ ಹ.ಈಸಾರನ್ನು(ಅ) ಅವರ ಪವಾಡ ಸದೃಶ ಜನನದ ಕಾರಣ ದೇವಪುತ್ರನೆನ್ನುವುದು ಹೇಗೆಂದು ಪವಿತ್ರ ಕುರ್‌ಆನ್ ಪ್ರಶ್ನಿಸುತ್ತದೆ.

## ಮರ್ಯಮ್‌ರ(ಅ) ಪರಿಪಾಲನೆ

ಹ.ಮರ್ಯಮ್‌ರ(ಅ) ತಾಯಿ ತಾವು ಹೊತ್ತ ಹರಕೆಯ ಪ್ರಕಾರ ಮರ್ಯಮ್‌ರನ್ನು ಹೈಕಲ್‌ನಲ್ಲಿ ಧರ್ಮಸೇವೆಗಾಗಿ ಸಮರ್ಪಿಸಲು ನಿರ್ಧರಿಸಿದಾಗ ಹೈಕಲ್‌ನಲ್ಲಿರುವ ಅರ್ಚಕರ ಮಧ್ಯೆ ಅವರ ಪರಿಪಾಲನೆ ಯಾರು ಮಾಡಬೇಕೆಂಬ ಸಮಸ್ಯೆ ಎದುರಾಗಿತ್ತು. ಮರ್ಯಮ್(ಅ) ಯುವತಿಯಾದುದರಿಂದ ಈ ಸಮಸ್ಯೆ ಅವರ ತಾಯಿಯ ಮಟ್ಟಿಗೆ ಬಹಳ ಗಂಭೀರವಾಗಿತ್ತು. ಆದ್ದರಿಂದ ಅರ್ಚಕರ ಮಧ್ಯೆ ಅದೃಷ್ಟ ಚೀಟಿ ಎತ್ತಿ ನಿರ್ಧರಿಸುವ ಪ್ರಮೇಯ ಬಂತು. ಹೀಗೆ ಹ.ಝುಕರಿಯ್ಯಾ(ಅ) ಹ.ಮರ್ಯಮರ ಸಂರಕ್ಷಕರಾದರು.

## ಮರ್ಯಮರಿಗೆ(ಅ) ಈಸಾರ(ಅ) ಸುವಾರ್ತೆ

ಹ.ಮರ್ಯಮರಿಗೆ ಈಸಾರ(ಅ) ಜನನದ ಸುವಾರ್ತೆ ಲಭಿಸುವ ಘಟನೆಯನ್ನು ಪವಿತ್ರ ಕುರ್‌ಆನ್ ಈ ರೀತಿ ವಿವರಿಸಿದೆ:

**"ದೇವಚರರು ಹೀಗೆ ಹೇಳಿದರು- ಓ ಮರ್ಯಮ್, ಅಲ್ಲಾಹ್ ನಿನಗೆ ತನ್ನ ಒಂದು 'ಫರಮಾನಿನ' (ಆಜ್ಞೆಯ) ಸುವಾರ್ತೆ ನೀಡುತ್ತಾನೆ. ಅವನ ಹೆಸರು ಮರ್ಯಮಳ ಪುತ್ರ ಮಸೀಹ್ ಈಸಾ ಎಂದಿರುವುದು. ಅವನು ಇಹ ಮತ್ತು ಪರಗಳಲ್ಲಿ ಪ್ರತಿಷ್ಠಿತ ನಾಗುವನು. ಅಲ್ಲಾಹನ ನಿಕಟದಾಸರಲ್ಲಿ ಗಣಿಸಲ್ಪಡುವನು. ತೊಟ್ಟಿಲಲ್ಲಿಯೂ ಅತಿ ವೃದ್ಧಾಪ್ಯಕ್ಕೆ ತಲುಪಿದಾಗಲೂ ಜನರೊಡನೆ ಮಾತನಾಡುವನು ಮತ್ತು ಅವನೊಬ್ಬ ಸಜ್ಜನನಾಗಿರುವನು. ಇದನ್ನು ಕೇಳಿ ಮರ್ಯಮ್ ಹೇಳಿದರು, 'ಓ ನನ್ನ ಪ್ರಭೂ, ನನ್ನಲ್ಲಿ ಮಗುವಾಗುವುದೆಲ್ಲಿಂದ? ನನ್ನನ್ನಂತು ಪುರುಷನಾರೂ ಸ್ಪರ್ಶಿಸಿಲ್ಲ.' ಉತ್ತರ ಸಿಕ್ಕಿತು- 'ಹಾಗೆಯೇ ಸಂಭವಿಸುವುದು.' ಅಲ್ಲಾಹ್ ತಾನಿಚ್ಛಿಸಿದುದನ್ನು ಸೃಷ್ಟಿಸುತ್ತಾನೆ. ಅವನು ಯಾವುದಾದರೊಂದು ಕಾರ್ಯವನ್ನು ಮಾಡಲು ನಿರ್ಧರಿಸಿದಾಗ, 'ಆಗು' ಎನ್ನುತ್ತಾನೆ ಮತ್ತು ಅದು ಆಗಿ ಬಿಡುತ್ತದೆ."**

**(3:45-47)**

ಅರ್ಥಾತ್ ಪುರುಷನಾರೂ ನಿನ್ನನ್ನು ಸ್ಪರ್ಶಿಸದಿರುವಾಗಲೂ ನಿನ್ನಲ್ಲಿ ಪುತ್ರನ ಜನನ ವಾಗುವುದು. ಹ.ಝುಕರಿಯ್ಯಾರ(ಅ) ಬಗೆಗೂ ಅಲ್ಲಾಹನು ಇದೇ ರೀತಿ ಹೇಳಿದ್ದನು. ಅಲ್ಲಿ

ತಂದೆಯ ಅತಿ ವೃದ್ಧಾಪ್ಯ ಮತ್ತು ತಾಯಿಯ ಬಂಜೆತನದ ಹೊರತಾಗಿಯೂ ಮಗನ ಜನನವಾಗುವುದೆಂಬ ವಾಗ್ದಾನವನ್ನು ಅಲ್ಲಾಹನು ನೀಡಿದ್ದನು. ಇಲ್ಲಿ ಲೈಂಗಿಕ ಸಂಪರ್ಕದ ಹೊರತಾಗಿಯೇ ಮಗು ಹುಟ್ಟುವ ಸುವಾರ್ತೆ ನೀಡಲಾಗಿದೆ. ವಾಸ್ತವದಲ್ಲಿ ಹ.ಈಸಾರ(ಅ) ಜನನವು ಈ ರೀತಿಯ ಪವಾಡದಿಂದಲೇ ಆಗಿತ್ತು.

ಒಂದು ವೇಳೆ ಹ.ಈಸಾರ(ಅ) ಜನನವು ಸಹಜ ಪ್ರಾಕೃತಿಕ ನಿಯಮದಂತೆಯೇ ಆಗಿರುತ್ತಿದ್ದರೆ ಹ.ಈಸಾರ(ಅ) ಕುರಿತು ಪವಿತ್ರ ಕುರ್‌ಆನಿನ ಎಲ್ಲ ಹೇಳಿಕೆಗಳೂ ನಿರರ್ಥಕವೆನಿಸುತ್ತವೆ.

ಕ್ರೈಸ್ತರು ಹ.ಈಸಾರನ್ನು(ಅ) ಅಲ್ಲಾಹನ ಪುತ್ರನೆನ್ನಲು ಮುಖ್ಯ ಕಾರಣ ಅವರ ಈ ರೀತಿಯ ಅಸಾಮಾನ್ಯ ಜನನವಾಗಿದೆ. ಯಹೂದಿಗಳು ಹ.ಮರ್ಯಮ್‌ರ(ಅ) ಮೇಲೆ ವ್ಯಭಿಚಾರದ ಆರೋಪ ಹೊರಿಸಲಿಕ್ಕೆ ಕಾರಣವೂ ಓರ್ವ ಕನ್ಯೆಯ ಗರ್ಭದಿಂದ ಮಗು ಜನಿಸಿರುವುದಾಗಿತ್ತು.

## ಹ.ಈಸಾರ(ಅ) ಜನನ

ಹ. ಈಸಾರ ಜನನದ ಹಿನ್ನೆಲೆಯ ಕುರಿತು ಪವಿತ್ರ ಕುರ್‌ಆನ್ ವಿವರವಾಗಿ ಈ ರೀತಿ ಪರಾಮರ್ಶಿಸಿದೆ.

"ಓ ಪೈಗಂಬರರೇ, ಈ ಗ್ರಂಥದಲ್ಲಿ ಮರ್ಯಮರ ವಿಷಯ ಪ್ರಸ್ತಾಪಿಸಿರಿ. ಅವರು ತನ್ನವರಿಂದ ಸರಿದು ಪೂರ್ವದಿಕ್ಕಿನಲ್ಲಿ ಏಕಾಂತ ವಾಸದಲ್ಲಿದ್ದಾಗ ಹಾಗೂ ತೆರೆಯನ್ನಿಳಿಸಿ ಅವರಿಂದ ಮರೆಯಾಗಿ ಕುಳಿತಿದ್ದ ಸ್ಥಿತಿಯಲ್ಲಿ ನಾವು ಅವರ ಬಳಿಗೆ ನಮ್ಮ ದೇವಚರನನ್ನು ಕಳುಹಿಸಿದೆವು. ಅವನು ಅವರ ಮುಂದೆ ಓರ್ವ ಪೂರ್ಣ ಮನುಷ್ಯ ರೂಪದಲ್ಲಿ ಪ್ರತ್ಯಕ್ಷನಾದನು. ಮರ್ಯಮ್- ಥಟ್ಟನೆ, 'ನೀನೊಬ್ಬ ದೇವಭಯವುಳ್ಳವನಾಗಿದ್ದರೆ ನಾನು ನಿನ್ನಿಂದ ದಯಾಮಯನಾದ ದೇವನ ಅಭಯ ಯಾಚಿಸುತ್ತೇನೆ' ಎಂದರು. ಆಗ ಅವನು, 'ನಾನು ನಿಮ್ಮ ಪ್ರಭುವಿನ ದೂತನಾಗಿರುತ್ತೇನೆ ಮತ್ತು ನಿಮಗೆ ಓರ್ವ ಪವಿತ್ರ ಬಾಲಕನನ್ನು ಕೊಡಲಿಕ್ಕಾಗಿ ಬಂದಿರುತ್ತೇನೆ' ಎಂದನು. ಆಗ ಮರ್ಯಮ್, 'ನನ್ನನ್ನು ಪುರುಷನಾರೂ ಮುಟ್ಟದೆ ಇರುವಾಗ ನನ್ನಲ್ಲಿ ಬಾಲಕನಾಗುವುದು ಹೇಗೆ? ಮತ್ತು ನಾನೇನೂ ದುರಾಚಾರಿ ಸ್ತ್ರೀಯಲ್ಲ' ಎಂದರು. ಆಗ ದೇವಚರರು, "ಹಾಗೆಯೇ ಆಗುವುದು ಇದು ನನಗೆ ಬಹಳ ಸುಲಭವಾದುದೆಂದೂ ಆ ಬಾಲಕನನ್ನು ಜನರಿಗೆ ಒಂದು ನಿದರ್ಶನವನ್ನಾಗಿ ಮತ್ತು ನಮ್ಮ ಕಡೆಯಿಂದ ಒಂದು ಕರುಣೆಯನ್ನಾಗಿ ಮಾಡಲಿಕ್ಕೋಸ್ಕರ ನಾವು ಹಾಗೆ ಮಾಡುವೆವೆಂದೂ ನಿನ್ನ ಪ್ರಭು ಹೇಳುತ್ತಾನೆ. ಈ ಕಾರ್ಯ ಆಗಿಯೇ ತೀರಬೇಕಾಗಿದೆ" ಎಂದನು. ಮರ್ಯಮರಿಗೆ ಆ ಮಗುವಿನ ಗರ್ಭ ಉಂಟಾಯಿತು ಮತ್ತು ಅವರು ಆ ಗರ್ಭ ಸಹಿತ ದೂರದ ಒಂದು ಸ್ಥಳಕ್ಕೆ ಹೋದರು. ತರುವಾಯ ಪ್ರಸವ ವೇದನೆಯು ಅವರನ್ನು ಒಂದು ಖರ್ಜೂರದ ಮರದೆಡೆಗೆ ತಲುಪಿಸಿತು. ಅವರು, "ಅಕಟ ನಾನು ಇದಕ್ಕಿಂತ ಮುಂಚೆ ಸತ್ತು ಹೋಗಿದ್ದರೆ! ಮತ್ತು ಹೇಳ ಹೆಸರಿಲ್ಲದಂತೆ ಅಳಿದು ಹೋಗಿದ್ದರೆ (ಚೆನ್ನಾಗಿತ್ತು)' ಎನ್ನತೊಡಗಿದರು.

ದೇವಚರನು ಕಾಲಬಳಿಯಿಂದ ಅವರನ್ನು ಕೂಗಿ ಇಂತೆಂದನು- 'ಮರುಗಬೇಡಿರಿ ನಿಮ್ಮ ಪ್ರಭು ನಿಮ್ಮ ತಳಭಾಗದಲ್ಲೊಂದು ಚಿಲುಮೆಯನ್ನು ಹರಿಸಿ ಬಿಟ್ಟಿದ್ದಾನೆ. ಮತ್ತು ನೀವು ಆ ಮರದ ಕಾಂಡವನ್ನು ಹಿಡಿದು ಅಲುಗಾಡಿಸಿರಿ. ನಿಮ್ಮ ಮೇಲೆ ಹಸನಾದ ಖರ್ಜೂರದ ಹಣ್ಣುಗಳು ಉದುರಿ ಬೀಳುವುವು. ಈ ರೀತಿಯಲ್ಲಿ ನೀವು ತಿಂದು, ಕುಡಿದು ಕಣ್ಮನಗಳನ್ನು ತಣಿಸಿರಿ. ನೀವು ಮಾನವರಾರನ್ನಾದರೂ ಕಂಡರೆ- ನಾನು ಕರುಣಾನಿಧಿ(ಅಲ್ಲಾಹ್)ಗಾಗಿ ಉಪವಾಸ ವ್ರತದ ಹರಕೆ ಹೊತ್ತಿರುವುದರಿಂದ ಇಂದು ಯಾರೊಡನೆಯೂ ಮಾತನಾಡಲಾರೆನೆಂದು' ಹೇಳಿಬಿಡಿರಿ. ಅನಂತರ ಅವರು ಆ ಮಗುವನ್ನೆತ್ತಿಕೊಂಡು ತನ್ನ ಜನಾಂಗದ ಬಳಿಗೆ ಹೋದರು. ಜನರು, 'ಓ ಮರ್ಯಮ್! ನೀನು ಘೋರ ಪಾತಕವನ್ನೆಸಗಿ ಬಿಟ್ಟೆ. ಓ ಹಾರೂನನ ಸಹೋದರಿ! ನಿನ್ನ ತಂದೆ ಕೆಟ್ಟವನಾಗಿರಲಿಲ್ಲ. ನಿನ್ನ ತಾಯಿಯೂ ದುಶ್ಶೀಲೆಯಾಗಿರಲಿಲ್ಲ'' ಎನ್ನತೊಡಗಿದರು. ಆಗ ಮರ್ಯಮ್, ಮಗುವಿನ ಕಡೆಗೆ ಇಷಾರೆ ಮಾಡಿದರು. ಆಗ ಜನರು, 'ಇದು ತೊಟ್ಟಿಲಲ್ಲಿ ಬಿದ್ದಿರುವಂತಹ ಒಂದು ಶಿಶು, ಇದರೊಡನೆ ನಾವೇನು ಮಾತನಾಡಬಹುದು?' ಎಂದರು. ಮಗು (ಹೀಗೆ) ಮಾತನಾಡತೊಡಗಿತು: 'ನಾನು ಅಲ್ಲಾಹನ ದಾಸ ಅವನು ನನಗೆ ಗ್ರಂಥ ನೀಡಿದನು. ಪ್ರವಾದಿಯನ್ನಾಗಿ ಮಾಡಿದನು- ಮತ್ತು ನನ್ನನ್ನು ನಾನೆಲ್ಲಿದ್ದರೂ ಅನುಗ್ರಹೀತನಾಗಿರುವಂತೆ ಮಾಡಿದನು ಮತ್ತು ನನ್ನ ಬಾಳಿನುದ್ದಕ್ಕೂ ನಮಾಝ್ ಮತ್ತು ಝಕಾತ್ ಪಾಲಿಸುತ್ತಿರಲು ಆಜ್ಞೆಯಿತ್ತನು. ನನ್ನನ್ನು ನನ್ನ ಮಾತೆಯ ಋಣ ಸಂದಾಯ ಮಾಡುವವನಾಗಿಸಿದನು ಮತ್ತು ನನ್ನನ್ನು ಅಹಂಕಾರಿಯನ್ನಾಗಿಯೂ ದುಷ್ಟನನ್ನಾಗಿಯೂ ಮಾಡಿರುವುದಿಲ್ಲ. ನಾನು ಜನಿಸಿದಾಗಲೂ ಸಾಯುವಾಗಲೂ ಜೀವಂತಗೊಳಿಸಿ ಎಬ್ಬಿಸಲ್ಪಡುವಾಗಲೂ ನನ್ನ ಮೇಲೆ ಶಾಂತಿ ಇದೆ.' ಇವರೇ ಮರ್ಯಮರ ಪುತ್ರ ಈಸಾ. ಇವರ ಬಗ್ಗೆ ಜನರು ಸಂಶಯ ಪಡುತ್ತಿರುವುದರ ಸತ್ಯಾಂಶವಿದು. ಯಾರನ್ನಾದರೂ ಮಗನಾಗಿ ಮಾಡಿಕೊಳ್ಳುವುದು ಅಲ್ಲಾಹನಿಗೆ ಭೂಷಣವಲ್ಲ. ಅವನು ಪರಿಶುದ್ಧನು. ಅವನು, ಏನಾದರೂ ಆಗಬೇಕೆಂದು ತೀರ್ಮಾನಿಸಿದರೆ 'ಆಗು' ಎಂದು ಬಿಡುತ್ತಾನೆ ಮತ್ತು ಅದು ಆಗಿಬಿಡುತ್ತದೆ.'' **(19:16-35)**

ಹ.ಮರ್ಯಮ್(ಅ) ಬೈತುಲ್ ಮಕ್ದಿಸ್‌ನ ಒಂದು ಕೋಣೆಯಲ್ಲಿ ತಪಶ್ಚರ್ಯೆಗೆ ಕುಳಿತಿದ್ದರು. ಆ ಕೋಣೆಯು ಬೈತುಲ್ ಮಕ್ದಿಸ್‌ನ ಪೂರ್ವ ದಿಕ್ಕಿನಲ್ಲಿತ್ತು. ಸಾಮಾನ್ಯವಾಗಿ ತಪಶ್ಚರ್ಯೆಗೆ ಕುಳಿತವರು ಮಾಡುವಂತೆ ಹ.ಮರ್ಯಮ್‌ರು(ಅ) ಒಂದು ಪರದೆಯನ್ನು ಇಳಿಬಿಟ್ಟು ತಮ್ಮನ್ನು ವೀಕ್ಷಕರ ದೃಷ್ಟಿಯಿಂದ ಮರೆಸಿಕೊಂಡಿದ್ದರು.

ಅಲ್ಲಾಹನ ಆಜ್ಞೆಯಂತೆ ಹ.ಮರ್ಯಮ್‌ರು(ಅ) ಗರ್ಭವತಿಯಾದಾಗ ದೂರದ ಬೆತ್ಲೆಹಮ್‌ಗೆ ಹೋದರು. ಹ.ಮರ್ಯಮ್‌ರು(ಅ) ಬೈತುಲ್ ಮಕ್ದಿಸ್‌ನಲ್ಲಿ ತಮ್ಮ ತಪಶ್ಚರ್ಯೆಯಿಂದ ಹೊರಬಂದು ಬೆತ್ಲೆಹಮ್‌ಗೆ ಹೋದದ್ದು ಒಂದು ಸಹಜ ಕ್ರಿಯೆಯಾಗಿತ್ತು. ಅವರು ಇಸ್ರಾಈಲ್ ಜನಾಂಗದ ಅತ್ಯಂತ ಪಾವನವಾದ ಹಾರೂನ್ ಮನೆತನದ ಕುವರಿಯಾಗಿದ್ದರು. ಮಾತ್ರವಲ್ಲ ಅಲ್ಲಾಹನ ಪವಿತ್ರ ಭವನವಾದ ಬೈತುಲ್ ಮಕ್ದಿಸ್‌ನಲ್ಲಿ

ಅವನಿಗಾಗಿ ತಪಶ್ಚರ್ಯೆಯಲ್ಲಿ ಕುಳಿತಿದ್ದರು. ಅವರು ತಮ್ಮ ಜೀವಮಾನವನ್ನು ದೇವಭಕ್ತಿ ಮತ್ತು ಧರ್ಮಸೇವೆಗಾಗಿ ಮುಡಿಪಾಗಿಟ್ಟಿದ್ದರು. ಅಂತಹ ಸಂದರ್ಭದಲ್ಲಿ ಅವರು ಒಮ್ಮೆಲೇ ಗರ್ಭವತಿಯಾಗುತ್ತಾರೆ. ಇಂತಹ ಸನ್ನಿವೇಶದಲ್ಲಿ ಅವರು ತಮ್ಮ ತಪಶ್ಚರ್ಯೆಯ ಸ್ಥಾನದಲ್ಲೇ ಕುಳಿತಿರುತ್ತಿದ್ದರೆ ಮತ್ತು ಜನರಿಗೆ ಅವರ ಗರ್ಭಧಾರಣೆಯ ಸುದ್ದಿ ಮುಟ್ಟುತ್ತಿದ್ದರೆ ಅವರ ಪರಿವಾರದವರು ಮಾತ್ರವಲ್ಲ ಜನಾಂಗದ ಇತರ ಜನರೂ ಅವರ ಜೀವನವನ್ನು ಅಸಹನೀಯ ಗೊಳಿಸುತ್ತಿದ್ದರು. ಆದ್ದರಿಂದ ಈ ಕಠಿಣ ಪರೀಕ್ಷೆಗೆ ಒಳಗಾದ ನಂತರ ಹ.ಮರ್ಯಮ್(ಅ) ಸದ್ದಿಲ್ಲದೆ ತಮ್ಮ ತಪಶ್ಚರ್ಯೆಯ ಕೋಣೆಯನ್ನು ಬಿಟ್ಟು ಹೊರಟು ಹೋಗುತ್ತಾರೆ. ತನ್ಮೂಲಕ ಅಲ್ಲಾಹನ ಇಚ್ಛೆಯು ಈಡೇರುವ ತನಕ ಜನಾಂಗದ ಛೀಮಾರಿ ಮತ್ತು ಸಾರ್ವಜನಿಕ ಅವಮಾನದಿಂದ ದೂರ ಉಳಿಯುತ್ತಾರೆ.

ಹ.ಮರ್ಯಮ್(ಅ) ತನ್ನ ಗರ್ಭಧಾರಣೆಯಿಂದಾಗಿ ಬಹಳ ಚಿಂತಾಕ್ರಾಂತರಾಗಿದ್ದರು. ಹೆರಿಗೆಯ ನೋವು ಆರಂಭವಾದಾಗ ಅವರ ಬಾಯಿಯಿಂದ ಹೊರಟ, **"ಅಕಟ! ನಾನು ಇದಕ್ಕಿಂತ ಮುಂಚೆಯೇ ಸತ್ತು ಹೋಗಿ ಹೇಳ ಹೆಸರಿಲ್ಲದಂತೆ ಆಗಿದ್ದರೆ ಎಷ್ಟು ಚೆನ್ನಾಗಿತ್ತು"** ಎಂಬ ಪದಗಳು ಅವರ ಚಿಂತೆಯ ತೀವ್ರತೆಯನ್ನು ಪ್ರಕಟಿಸುತ್ತವೆ. ಈ ಪದಗಳು ಅವರ ಬಾಯಿಯಿಂದ ಪ್ರಸವ ವೇದನೆಯಿಂದಾಗಿ ಹೊರಟದ್ದಲ್ಲ. ಅಲ್ಲಾಹನು ಅವರನ್ನು ಗುರಿಪಡಿಸಿ ದ್ದಂತಹ ಕಠಿಣ ಪರೀಕ್ಷೆಯಿಂದ ಯಶಸ್ವಿಯಾಗಿ ಪಾರಾಗುವುದು ಹೇಗೆಂಬುದೇ ಅವರ ಚಿಂತೆಗೆ ಕಾರಣವಾಗಿತ್ತು. ಗರ್ಭವನ್ನಂತೂ ಈ ತನಕ ಹೇಗೂ ಅಡಗಿಸಿದ್ದಾಯಿತು. ಈಗ ಈ ಮಗುವನ್ನು ಎಲ್ಲಿಗೆ ಒಯ್ಯಲಿ ಎಂಬುದು ಅವರ ಚಿಂತೆಯಾಗಿತ್ತು. ಅಂತಹ ಸಂದರ್ಭದಲ್ಲಿ ಅಲ್ಲಾಹನು ಅವರಿಗೆ ಸಾಂತ್ವನ ನೀಡುತ್ತಾನೆ. ಆ ಮಗುವಿನ ಕುರಿತು ನಿನಗೇನೂ ಹೇಳುವ ಪ್ರಮೇಯ ಬರಲಾರದು. ಅದರ ಹುಟ್ಟಿನ ಬಗ್ಗೆ ಆಕ್ಷೇಪಿಸುವವರಿಗೆ ಉತ್ತರಿಸುವ ಹೊಣೆಯು ನನ್ನ ಮೇಲಿರುವುದು ಎಂದು ಅಲ್ಲಾಹನು ಅವರಿಗೆ ಭರವಸೆ ನೀಡಿದನು. ಇಸ್ರಾಈಲ್ ಜನಾಂಗದಲ್ಲಿ ಮೌನವ್ರತ ಆಚರಿಸುವಂತಹ ಪದ್ಧತಿಯಿತ್ತು. ಆ ಪ್ರಕಾರ ತಾನು ಪರಮ ದಯಾಮಯನಾದ ಅಲ್ಲಾಹನಿಗಾಗಿ ಮೌನವ್ರತ ಆಚರಿಸಿರುವೆನೆಂದು ಹೇಳಿಬಿಡುವಂತೆ ಅಲ್ಲಾಹನು ಅವರಿಗೆ ಆದೇಶಿಸಿದನು.

ಪ್ರವಾದಿ ಈಸಾರ(ಅ) ಜನನವು ಒಂದು ಅದ್ಭುತ ಪವಾಡವಾಗಿದೆಯೆಂಬುದು ಖಚಿತ. ಆದರೆ ಆ ರೀತಿಯ ಜನನದಿಂದಾಗಿ ಅವರು ದೇವಪುತ್ರನೆನಿಸುತ್ತಾರೆಂಬುದು ಮಾತ್ರ ಒಂದು ಭ್ರಾಮಕ ಮತ್ತು ಅತಿಶಯೋಕ್ತ ನಂಬಿಕೆಯಾಗಿದೆ. ಸೃಷ್ಟಿಯು ಎಂದೂ ಅಲ್ಲಾಹನ ಪುತ್ರನಾಗುವುದು ಸಾಧ್ಯವಿಲ್ಲ. ಪ್ರಥಮ ಮಾನವ ಹ.ಆದಮ್(ಅ) ಅವರನ್ನು ಅಲ್ಲಾಹನು ತಂದೆ-ತಾಯಿಗಳಿಬ್ಬರೂ ಇಲ್ಲದೆಯೇ ನೇರವಾಗಿ ಮಣ್ಣಿನಿಂದ ಸೃಷ್ಟಿಸಿದನು. ಅದಕ್ಕೆ ತನ್ನ ಆತ್ಮವನ್ನು ಊದಿದಾಗ ಆದಮ್(ಅ) ಅಸ್ತಿತ್ವಕ್ಕೆ ಬಂದರು. ಆ ರೀತಿಯ ಪವಾಡಸದೃಶ ಸೃಷ್ಟಿಯಿಂದಾಗಿ ಹ.ಆದಮ್(ಅ) ಅವರನ್ನು ಯಾರೂ ಅಲ್ಲಾಹನ ಪುತ್ರನೆನ್ನುವುದಿಲ್ಲ. ನೈಸರ್ಗಿಕ ನಿಯಮಗಳಿಗೆ ಅತೀತವಾಗಿ ಸೃಷ್ಟಿಯಾದ ಕಾರಣದಿಂದ ಒಬ್ಬನು ದೇವ ಪುತ್ರನಾಗುವುದಾದರೆ ತಂದೆಯಿಲ್ಲದೆ ಕೇವಲ ತಾಯಿಯಿಂದ ಜನಿಸಿದ

ಈಸಾ(ಅ) ಅವರಿಗಿಂತ, ತಂದೆ-ತಾಯಿಗಳಿಬ್ಬರೂ ಇಲ್ಲದೆಯೇ ಜನಿಸಿದ ಹ.ಆದಮ್(ಅ) ದೇವಪುತ್ರನೆನಿಸಿಕೊಳ್ಳಲು ಹೆಚ್ಚು ಅರ್ಹರಾಗಿದ್ದಾರೆ!

ಅದೇ ರೀತಿ ಹ.ಯಹ್ಯಾರ(ಅ) ಜನನವೂ ಇನ್ನೊಂದು ಪವಾಡದ ಮೂಲಕವೇ ಆಗಿದೆ. ಹಣ್ಣು ಮುದುಕನಾದ ತಂದೆ ಮತ್ತು ಬಂಜೆಯಾದ ತಾಯಿಯ ಮೂಲಕ ಹ.ಯಹ್ಯಾರ(ಅ) ಜನನವು ಹ.ಈಸಾರ(ಅ) ಜನನಕ್ಕಿಂತ ಕೇವಲ ಆರು ತಿಂಗಳ ಹಿಂದೆ ನಡೆದಿತ್ತು. ಅವರನ್ನು ಯಾರೂ ದೇವಪುತ್ರನೆನ್ನುವುದಿಲ್ಲ. ಕ್ರೈಸ್ತ ವರದಿಗಳ ಪ್ರಕಾರವೇ, ಹ.ಯಹ್ಯಾ(ಅ) ಮತ್ತು ಹ.ಈಸಾ(ಅ) ಅವರಿಬ್ಬರೂ ವಿಭಿನ್ನ ರೀತಿಯಲ್ಲಿ ಪವಾಡದಿಂದ ಜನಿಸಿದ್ದರು. ಲೂಕನ ಬೈಬಲ್‌ನಲ್ಲಿ ಕುರ್‌ಆನಿನಂತೆಯೇ ಈ ಎರಡೂ ಪವಾಡಗಳನ್ನು ಒಂದೇ ವಿವರಣಾ ಪರಂಪರೆಯಲ್ಲಿ ವಿವರಿಸಲಾಗಿದೆ. ಆದರೆ ಒಂದು ಪವಾಡದಿಂದ ಜನಿಸಿದವರನ್ನು ಅಲ್ಲಾಹನ ದಾಸನೆಂದೂ ಇನ್ನೊಂದು ಪವಾಡದ ಮೂಲಕ ಜನಿಸಿದವರನ್ನು ಅಲ್ಲಾಹನ ಪುತ್ರನೆಂದೂ ಸಾರುವುದು ವಿರೋಧಾಭಾಸವಲ್ಲವೆ?

## ಈಸಾರ(ಅ) ಪವಾಡಗಳು

ಪ್ರವಾದಿ ಈಸಾ(ಅ) ಅವರಿಂದ ಪ್ರಕಟವಾದ ಪವಾಡಗಳ ಕುರಿತು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

"ತೊಟ್ಟಿಲಲ್ಲಿಯೂ ಅತಿ ವೃದ್ಧಾಪ್ಯಕ್ಕೆ ತಲುಪಿದಾಗಲೂ ಜನರೊಡನೆ ಮಾತನಾಡುವನು ಮತ್ತು ಅವನೊಬ್ಬ ಸಜ್ಜನನಾಗಿರುವನು. ಇದನ್ನು ಕೇಳಿ ಮರ್ಯಮ್ ಹೇಳಿದರು, 'ಓ ನನ್ನ ಪ್ರಭೂ, ನನ್ನಲ್ಲಿ ಮಗುವಾಗುವುದೆಲ್ಲಿಂದ? ನನ್ನನ್ನಂತು ಪುರುಷನಾರೂ ಸ್ಪರ್ಶಿಸಿಲ್ಲ.' ಉತ್ತರ ಸಿಕ್ಕಿತು- 'ಹಾಗೆಯೇ ಸಂಭವಿಸುವುದು.' ಅಲ್ಲಾಹ್ ತಾನಿಚ್ಛಿಸಿದುದನ್ನು ಸೃಷ್ಟಿಸುತ್ತಾನೆ. ಅವನು ಯಾವುದಾದರೊಂದು ಕಾರ್ಯವನ್ನು ಮಾಡಲು ನಿರ್ಧರಿಸಿದಾಗ, 'ಆಗು' ಎನ್ನುತ್ತಾನೆ ಮತ್ತು ಅದು ಆಗಿ ಬಿಡುತ್ತದೆ. (ದೇವಚರರು ತಮ್ಮ ಮಾತು ಮುಂದುವರಿಸುತ್ತ ಹೇಳಿದರು)- 'ಅಲ್ಲಾಹ್ ಅವನಿಗೆ ಗ್ರಂಥ ಮತ್ತು ಯುಕ್ತಿಯ ಶಿಕ್ಷಣ ನೀಡುವನು. ತೌರಾತ್ ಮತ್ತು ಇಂಜೀಲಿನ ವಿದ್ಯೆ ಕಲಿಸುವನು. ಮತ್ತು ಅವನನ್ನು ಬನೀಇಸ್ರಾಈಲರ ಕಡೆಗೆ ಸಂದೇಶವಾಹಕನನ್ನಾಗಿ ನೇಮಕ ಮಾಡುವನು.' (ಅವನು ಸಂದೇಶವಾಹಕನ ನೆಲೆಯಲ್ಲಿ ಬನೀಇಸ್ರಾಈಲರ ಬಳಿಗೆ ಬಂದಾಗ ಹೀಗೆ ಹೇಳಿದನು) ನಾನು ನಿಮ್ಮ ಪ್ರಭುವಿನ ವತಿಯಿಂದ ನಿಮ್ಮ ಬಳಿಗೆ ಕುರುಹುಗಳೊಂದಿಗೆ ಬಂದಿರುತ್ತೇನೆ. ನಾನು ನಿಮ್ಮ ಮುಂದೆ ಪಕ್ಷಿ ರೂಪದ ಆಕೃತಿ ಮಾಡುತ್ತೇನೆ ಮತ್ತು ಅದಕ್ಕೆ ಉಸಿರೂದಿ ಬಿಡುತ್ತೇನೆ. ಅದು ಅಲ್ಲಾಹನ ಅಪ್ಪಣೆಯಿಂದ ಪಕ್ಷಿಯಾಗುತ್ತದೆ. ನಾನು ಅಲ್ಲಾಹನ ಅಪ್ಪಣೆಯಿಂದ ಹುಟ್ಟು ಕುರುಡರನ್ನೂ ಕುಷ್ಠ ರೋಗಿಗಳನ್ನೂ ಗುಣಪಡಿಸುತ್ತೇನೆ ಮತ್ತು ಅವನ ಅಪ್ಪಣೆ ಯಿಂದ ಸತ್ತವರನ್ನು ಜೀವಂತಗೊಳಿಸುತ್ತೇನೆ. ನೀವು ಏನು ಉಣ್ಣುತ್ತೀರೆಂಬುದನ್ನೂ ನಿಮ್ಮ ಮನೆಗಳಲ್ಲಿ ಏನೇನನ್ನು ದಾಸ್ತಾನು ಮಾಡಿಡುತ್ತೀರೆಂಬುದನ್ನೂ ಹೇಳುತ್ತೇನೆ. ನೀವು ವಿಶ್ವಾಸವಿರಿಸುವವರಾದರೆ ನಿಮಗೆ ಇದರಲ್ಲಿ ಸಾಕಷ್ಟು ನಿದರ್ಶನವಿದೆ." (3:36-49)

ಇನ್ನೊಂದೆಡೆ ಹೀಗೆ ಹೇಳಲಾಗಿದೆ:

"ಅಲ್ಲಾಹನು ಹೀಗೆ ಹೇಳಲಿರುವ ಆ ಸಂದರ್ಭವನ್ನು ಊಹಿಸಿರಿ- ಓ ಮರ್ಯಮರ ಪುತ್ರ ಈಸಾ, ನಾನು ನಿನಗೂ ನಿನ್ನ ಮಾತೆಗೂ ದಯಪಾಲಿಸಿದ್ದ 'ಭವ್ಯ ಕೊಡುಗೆಗಳನ್ನು' ಜ್ಞಾಪಿಸು. ನಾನು ಪವಿತ್ರಾತ್ಮನ ಮೂಲಕ ನಿನಗೆ ಸಹಾಯ ಮಾಡಿದೆ. ನೀನು ತೊಟ್ಟಿಲಲ್ಲಿಯೂ ವೃದ್ಧಾಪ್ಯದಲ್ಲಿಯೂ ಮಾತಾಡುತ್ತಿದ್ದೆ. ನಾನು ನಿನಗೆ ಗ್ರಂಥ ಮತ್ತು ಯುಕ್ತಿ, ತೌರಾತ್ ಮತ್ತು ಇಂಜೀಲ್‌ಗಳನ್ನು ಕೊಟ್ಟಿದ್ದೆ. ನೀನು ನನ್ನ ಅಪ್ಪಣೆಯಿಂದ ಮಣ್ಣಿನಿಂದ ಪಕ್ಷಿಯ ಪ್ರತಿರೂಪವನ್ನು ರಚಿಸುತ್ತಿದ್ದೆ ಮತ್ತು ಅದಕ್ಕೆ ಊದುತ್ತಿದ್ದೆ. ಅದು ನನ್ನ ಅಪ್ಪಣೆಯಿಂದ ಪಕ್ಷಿಯಾಗಿ ಬಿಡುತ್ತಿತ್ತು. ನೀನು ಹುಟ್ಟು ಕುರುಡರನ್ನೂ ಕುಷ್ಠರೋಗಿಗಳನ್ನೂ ನನ್ನ ಅಪ್ಪಣೆಯಿಂದ ವಾಸಿ ಮಾಡುತ್ತಿದ್ದೆ. ಮೃತ ದೇಹಗಳನ್ನು ನನ್ನ ಅಪ್ಪಣೆಯಿಂದ ಎಬ್ಬಿಸುತ್ತಿದ್ದೆ. ಮುಂದೆ ನೀನು ಬನೀಇಸ್ರಾಈಲರ ಬಳಿಗೆ ಸುವ್ಯಕ್ತ ದೃಷ್ಟಾಂತಗಳನ್ನು ಕೊಂಡು ಹೋದಾಗ ಅವರಲ್ಲಿದ್ದ ಸತ್ಯನಿಷೇಧಿಗಳು ಈ ದೃಷ್ಟಾಂತಗಳು ಮಾಟಗಾರಿಕೆಯ ವಿನಾ ಬೇರೇನೂ ಅಲ್ಲವೆಂದರು. ಆಗ ನಾನೇ ನಿನ್ನನ್ನು ಅವರಿಂದ ರಕ್ಷಿಸಿದೆನು." (5:110)

## ಹವಾರೀಗಳ ಸತ್ಯವಿಶ್ವಾಸ ಸ್ವೀಕಾರ

ಹ.ಈಸಾ(ಅ) ಅವರ ಮೇಲೆ ವಿಶ್ವಾಸವಿರಿಸಿ ಅವರ ಅನುಯಾಯಿಗಳಾದವರನ್ನು ಪವಿತ್ರ ಕುರ್‌ಆನಿನಲ್ಲಿ 'ಹವಾರೀಗಳು' ಎನ್ನಲಾಗಿದೆ. 'ಹವಾರೀ' ಎಂದರೆ ಸಹಾಯಕ. ಇದೇ ಅರ್ಥವನ್ನು ಸೂಚಿಸುವ ಇನ್ನೊಂದು ಪದ ಕುರ್‌ಆನಿನಲ್ಲಿ ಬಳಕೆಯಾಗಿದೆ. ಅದುವೇ 'ಅನ್ಸಾರ್.' ಸಾಮಾನ್ಯವಾಗಿ ಬೈಬಲ್‌ನಲ್ಲಿ ಪ್ರವಾದಿ ಈಸಾರ(ಅ) ಅನುಯಾಯಿಗಳಿಗೆ 'ಶಿಷ್ಯರು' ಎಂಬ ಪದವನ್ನು ಬಳಸಲಾಗಿದೆ. ಕೆಲವು ಕಡೆಗಳಲ್ಲಿ ಅವರನ್ನು ದೂತರು (Apostle) ಎಂದು ಕರೆಯಲಾಗಿದೆ. ಪ್ರವಾದಿ ಈಸಾರು(ಅ) ತಮ್ಮ ಅನುಯಾಯಿಗಳನ್ನು ತಮ್ಮ ಪ್ರತಿನಿಧಿಯೆಂಬ ನೆಲೆಯಲ್ಲಿ ಧರ್ಮ ಪ್ರಚಾರದ ಕಾರ್ಯಕ್ಕಾಗಿ ಕಳುಹಿಸುತ್ತಿದ್ದರು. ಇದೇ ಅರ್ಥದಲ್ಲಿ ಅವರನ್ನು ದೂತರು ಎಂದು ಹೇಳಲಾಗಿದೆಯೇ ಹೊರತು ಅವರು ಅಲ್ಲಾಹನ ಸಂದೇಶವಾಹಕರಾಗಿದ್ದರು ಎಂಬರ್ಥದಲ್ಲಿ ಅಲ್ಲ.

ಹವಾರೀಗಳ ಸತ್ಯವಿಶ್ವಾಸ ಸ್ವೀಕಾರದ ಕುರಿತು ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

"ನನ್ನ ಮೇಲೂ ನನ್ನ ಸಂದೇಶವಾಹಕರ ಮೇಲೂ ವಿಶ್ವಾಸವಿಡಿರೆಂದು ಹವಾರಿಗಳಿಗೆ ನಾನು ಸೂಚನೆ ಕೊಟ್ಟಾಗ, ನಾವು ವಿಶ್ವಾಸವಿಟ್ಟೆವೆಂದೂ ನಾವು ಮುಸ್ಲಿಮರಾಗಿರುವ ಬಗ್ಗೆ ಸಾಕ್ಷಿ ನಿಲ್ಲಿರೆಂದೂ ಅವರು ಹೇಳಿದರು. (ಹವಾರಿಗಳಿಗೆ ಸಂಬಂಧಿಸಿದ) ಈ ಘಟನೆಯೂ ನೆನಪಿರಲಿ: ಹವಾರಿಗಳು, 'ಓ ಮರ್ಯಮರ ಪುತ್ರ ಈಸಾ, ನಿಮ್ಮ ಪ್ರಭು ನಮ್ಮ ಮೇಲೆ ಆಕಾಶದಿಂದ ಊಟದ ಹರಿವಾಣವನ್ನು ಇಳಿಸ ಬಲ್ಲನೇ?' ಎಂದು ಕೇಳಿದಾಗ ಈಸಾರವರು ನೀವು ಸತ್ಯವಾದಿಗಳಾಗಿದ್ದರೆ ಅಲ್ಲಾಹನನ್ನು ಭಯಪಡಿರೆಂದರು. ಆಗ ಅವರು, 'ನಾವು ಆ ಹರಿವಾಣದಿಂದ ಉಣ್ಣುವಂತಾಗಲಿಕ್ಕೂ ಅದರಿಂದ ನಮ್ಮ ಮನಸ್ಸಿಗೆ ಶಾಂತಿಯುಂಟಾಗಲಿಕ್ಕೂ ತಾವು ನಮ್ಮೊಡನೆ ಹೇಳಿದುದೆಲ್ಲ ಸತ್ಯವೆಂದು ನಮಗೆ ತಿಳಿದುಬರಲಿಕ್ಕೂ ನಾವು ಅದರ ಬಗ್ಗೆ

ಸಾಕ್ಷಿಗಳಾಗಿರಲಿಕ್ಕೂ ಬಯಸುತ್ತೇವೆ' ಎಂದರು. ಆಗ ಮರ್ಯಮರ ಪುತ್ರ ಈಸಾರವರು ಹೀಗೆ ಪ್ರಾರ್ಥಿಸಿದರು: 'ಓ ಅಲ್ಲಾಹ್, ನಮ್ಮ ಪ್ರಭೂ, ಆಕಾಶದಿಂದ ನಮಗೊಂದು ಊಟದ ಹರಿವಾಣವನ್ನು ಇಳಿಸು. ಅದು ನಮಗೂ ನಮ್ಮ ಹಿಂಗಾಮಿಗಳಿಗೂ ಮುಂಗಾಮಿಗಳಿಗೂ ಸಂತಸದ ಸಂದರ್ಭವಾಗಿಯೂ ನಿನ್ನ ಕಡೆಯಿಂದ ಒಂದು ದೃಷ್ಟಾಂತವಾಗಿಯೂ ಪರಿಣಮಿಸಲಿ. ನಮಗೆ ಆಹಾರ ಪ್ರದಾನ ಮಾಡು. ನೀನು ಅತ್ಯುತ್ತಮ ಅನ್ನದಾತನು.' ಅಲ್ಲಾಹನು ಉತ್ತರವಿತ್ತನು: ನಾನು ಅದನ್ನು ನಿಮ್ಮ ಮೇಲೆ ಇಳಿಸುವವನಿದ್ದೇನೆ. ಆದರೆ ಅನಂತರ ನಿಮ್ಮ ಪೈಕಿ ಸತ್ಯನಿಷೇಧ ಕೈಗೊಂಡವನಿಗೆ ಜಗತ್ತಿನಲ್ಲಿ ಬೇರಾರಿಗೂ ಕೊಡದಂಥ ಶಿಕ್ಷೆ ಕೊಡುವೆನು.'' **(5:33-37)**

ಈ ಸೂಕ್ತಗಳಿಂದ ಕೆಲವು ಪ್ರಮುಖ ವಿಷಯಗಳು ತಿಳಿದುಬರುತ್ತವೆ:

1. ಹವಾರಿಗಳು ಪ್ರವಾದಿ ಈಸಾ(ಅ) ಅವರ ಮೇಲೆ ವಿಶ್ವಾಸವಿರಿಸುವುದಕ್ಕೆ ಮುಖ್ಯ ಕಾರಣ ಅಲ್ಲಾಹನ ಅನುಗ್ರಹ ಮತ್ತು ಅವನು ದಯಪಾಲಿಸಿದ ಸೌಭಾಗ್ಯವಾಗಿದೆ. ಅನ್ಯಥಾ ಆ ಸತ್ಯನಿಷೇಧಿಗಳ ಜನಾಂಗದಲ್ಲಿ ಒಬ್ಬನೇ ಒಬ್ಬ ವಿಶ್ವಾಸಿಯನ್ನು ಉಂಟು ಮಾಡುವುದು ಪ್ರವಾದಿ ಈಸಾ(ಅ) ಅವರ ಸಾಮರ್ಥ್ಯಕ್ಕೆ ಮೀರಿದ ವಿಷಯವಾಗಿತ್ತು.

2. ಎಲ್ಲ ಪ್ರವಾದಿಗಳ ಅನುಯಾಯಿಗಳಂತೆ ಹವಾರೀಗಳು ಕೂಡಾ ಮುಸ್ಲಿಮರೇ (ದೇವನಿಗೆ ಶರಣಾದವರು) ಆಗಿದ್ದರು. ಯಾವ ಪ್ರವಾದಿಯೂ ಒಂದು ಹೊಸ ಧರ್ಮವನ್ನು ಸ್ಥಾಪಿಸಲು ಬಂದಿರಲಿಲ್ಲ. ಎಲ್ಲರೂ ದೇವನಿಗೆ ಶರಣಾಗಿ ಬಾಳುವ ಒಂದೇ ಒಂದು ಧರ್ಮ ವನ್ನು ತಂದಿದ್ದರು. ಅದನ್ನೇ ಅರಬಿ ಭಾಷೆಯಲ್ಲಿ ಇಸ್ಲಾಮ್ ಎನ್ನಲಾಗುತ್ತದೆ. ಇಸ್ಲಾಮ್ ಎಂದರೆ ವಿಧೇಯತೆ, ಅನುಸರಣೆ, ಶರಣಾಗತಿ ಮತ್ತು ಶಾಂತಿ ಎಂದಾಗಿದೆ. ಪ್ರವಾದಿ ಈಸಾ(ಅ) ಅವರ ಅನುಯಾಯಿಗಳು ತಮ್ಮನ್ನು ಮುಸ್ಲಿಮರು ಎಂದೇ ಗುರುತಿಸಿಕೊಂಡಿದ್ದರು.

3. ಹವಾರೀಗಳು ತಮಗಾಗಿ ಒಂದು ಊಟದ ಹರಿವಾಣವು ಆಕಾಶದಿಂದ ಇಳಿದು ಬರಬೇಕೆಂದು ಬಯಸಿದಾಗ, ನೀವು ನಿಮ್ಮ ಪ್ರಭುವಾದ ಅಲ್ಲಾಹನಲ್ಲಿ ಪ್ರಾರ್ಥಿಸಿ ನಮಗಾಗಿ ಒಂದು ಊಟದ ಹರಿವಾಣವನ್ನು ಇಳಿಸುವಂತೆ ಬೇಡಬೇಕೆಂದು ಕೋರಿದ್ದರು. ಅರ್ಥಾತ್ ಅವರು ಈಸಾ(ಅ) ಅವರನ್ನು ಅಲ್ಲಾಹನ ದಾಸರೆಂದೇ ನಂಬಿದ್ದರು. ಅವರು ತಮ್ಮ ಗುರು ಮತ್ತು ಪ್ರವಾದಿಯನ್ನು ದೇವನೆಂದೋ, ದೇವಾಂಶ ಸಂಭೂತನೆಂದೋ ದೇವಪುತ್ರನೆಂದೋ ದೇವ ಸಹಭಾಗಿಯೆಂದೋ ಭಾವಿಸುತ್ತಿರಲಿಲ್ಲ. ಈಸಾ(ಅ) ಅವರೂ ತಮ್ಮನ್ನು ದೇವನ ದಾಸ ಮತ್ತು ಪ್ರವಾದಿಯೆಂಬ ನೆಲೆಯಲ್ಲೇ ಜನರ ಮುಂದಿರಿಸಿದ್ದರು.

4. ಕ್ರೈಸ್ತರು ಈಸಾ(ಅ) ಅವರನ್ನು ಮಾತ್ರ ದೇವಪುತ್ರನೆಂದು ಸಾರಿದ್ದಲ್ಲ. ಪವಿತ್ರಾತ್ಮನನ್ನು ದೇವತ್ವದಲ್ಲಿ ಸಹಭಾಗಿಯಾಗಿ ಮಾಡಿದ್ದರು. ಮಾತ್ರವಲ್ಲದೆ ಈಸಾ(ಅ) ಅವರ ತಾಯಿಯಾದ ಮರ್ಯಮ್(ಅ) ಅವರನ್ನೂ ಅವರು ಆರಾಧ್ಯರಾಗಿ ಮಾಡಿಕೊಂಡಿದ್ದಾರೆ. ಹ.ಮರ್ಯಮ್(ಅ) ಅವರ ದೇವತ್ವದ ಕುರಿತು ಯಾವುದೇ ಸೂಚನೆ ನಮಗೆ ಬೈಬಲ್‌ನಲ್ಲಿಯೂ ಸಿಗುವುದಿಲ್ಲ. ಈಸಾ(ಅ) ಅವರ ಬಳಿಕ ಮೂರು ಶತಮಾನಗಳ ತನಕ

ಕ್ರೈಸ್ತ ಜಗತ್ತಿನಲ್ಲಿ ಈ ಕಲ್ಪನೆಯೇ ಇರಲಿಲ್ಲ. ಕ್ರಿ.ಶ. ಮೂರನೆಯ ಶತಮಾನದ ಕೊನೆಯ ವೇಳೆಗೆ ಅಲೆಕ್ಸಾಂಡ್ರಿಯದ ಕೆಲವು ಧಾರ್ಮಿಕ ವಿದ್ವಾಂಸರು ಪ್ರಥಮ ಬಾರಿಗೆ ಹ.ಮರ್ಯಮ್(ಅ) ಅವರಿಗೆ 'ದೇವಮಾತೆ' ಎಂಬ ಪದಗಳನ್ನು ಬಳಸಿದರು. ಅನಂತರ ಮರ್ಯಮ್‌ರ ದೇವತ್ವದ ಕಲ್ಪನೆ ಮತ್ತು ಮರ್ಯಮ್‌ರನ್ನು ಪೂಜಿಸುವ ಕ್ರಮವು ಕ್ರೈಸ್ತರಲ್ಲಿ ವ್ಯಾಪಿಸತೊಡಗಿತು. ಆದರೆ ಮೊದಮೊದಲು ಆ ಕಲ್ಪನೆಯನ್ನು ಚರ್ಚ್ ವಿಧಿಯುಕ್ತವಾಗಿ ಅಂಗೀಕರಿಸಿರಲಿಲ್ಲ. ಮರ್ಯಮ್‌ರನ್ನು(ಅ) ಆರಾಧಿಸುವವರನ್ನು ವಿಶ್ವಾಸ ಕೆಟ್ಟವರೆಂದೇ ಅವರು ಪರಿಗಣಿಸುತ್ತಿದ್ದರು. ಈಸಾ(ಅ) ಅವರ ಅಸ್ತಿತ್ವದಲ್ಲಿ ಎರಡು ವಿಭಿನ್ನ ವ್ಯಕ್ತಿತ್ವಗಳು ಒಟ್ಟುಗೂಡಿದ್ದುವು ಎಂಬ ನಸ್ತೂರೈಸ್‌ನ ಕಲ್ಪನೆಯ ಬಗ್ಗೆ ಕ್ರೈಸ್ತ ಜಗತ್ತಿನಲ್ಲಿ ವಾದ-ವಿವಾದಗಳ ಒಂದು ಕೋಲಾಹಲವೇ ಎದ್ದಿತ್ತು. ಅದರ ತೀರ್ಮಾನಕ್ಕಾಗಿ ಕ್ರಿ.ಶ. 431ರಲ್ಲಿ ಅಫ್‌ಸೋಸ್ ಎಂಬ ನಗರದಲ್ಲಿ ಒಂದು ಪರಿಷತ್ತು ಏರ್ಪಟ್ಟಿತ್ತು. ಆ ಪರಿಷತ್ತಿನಲ್ಲಿ ಪ್ರಥಮ ಬಾರಿಗೆ ಮರ್ಯಮ್(ಅ) ಅವರಿಗೆ 'ದೇವಮಾತೆ' ಎಂಬ ಬಿರುದನ್ನು ಬಳಸಲಾಯಿತು. ಇದರಿಂದಾಗಿ ಆ ತನಕ ಚರ್ಚ್‌ನ ಹೊರಗಡೆ ವ್ಯಾಪಿಸಿದ್ದಂತಹ ಮರ್ಯಮರನ್ನು ಪೂಜಿಸುವ ವ್ಯಾಧಿಯು ಕ್ಷಿಪ್ರವಾಗಿ ಚರ್ಚ್‌ನ ಒಳಗೂ ವ್ಯಾಪಿಸ ತೊಡಗಿತ್ತು. ಪವಿತ್ರ ಕುರ್‌ಆನಿನ ಅವತೀರ್ಣದ ವೇಳೆಗೆ ಮರ್ಯಮ್ ದೊಡ್ಡ 'ದೇವಿ'ಯಾಗಿ ಮಾರ್ಪಟ್ಟಿದ್ದರು. ತಂದೆ-ಮಗ ಮತ್ತು ಪವಿತ್ರಾತ್ಮರಿಗಿಂತಲೂ ಹಿರಿದಾದ ಸ್ಥಾನವು ಈ 'ದೇವಮಾತೆ'ಗೆ ಸಲ್ಲತೊಡಗಿತ್ತು. ಅವರ ಮೂರ್ತಿಯನ್ನು ಅಲ್ಲಲ್ಲಿ ಪ್ರತಿಷ್ಠಾಪಿಸಲಾಯಿತು. ಅವುಗಳ ಮುಂದೆ ಪೂಜಾ ವಿಧಿಗಳು ನಡೆಯತೊಡಗಿದ್ದುವು. ಅವುಗಳಲ್ಲಿ ಪ್ರಾರ್ಥನೆಗಳನ್ನು ಸಲ್ಲಿಸಲಾಗುತ್ತಿತ್ತು. ಅವರನ್ನು ಪ್ರಾರ್ಥನೆಗಳನ್ನು ಮನ್ನಿಸುವವರು, ಬೇಡಿಕೆಗಳನ್ನು ಈಡೇರಿಸುವವರು, ಸಂಕಷ್ಟಗಳನ್ನು ನೀಗಿಸುವವರು ಮತ್ತು ದೀನದಲಿತರ ಬೆಂಬಲಿಗರೆಂದು ಪರಿಗಣಿಸಲಾಗುತ್ತಿತ್ತು. 'ದೇವಮಾತೆ'ಯ ಬೆಂಬಲ ಗಳಿಸುವುದೇ ಕ್ರೈಸ್ತರ ಅತಿದೊಡ್ಡ ಆಸರೆಯಾಗಿ ಮಾರ್ಪಟ್ಟಿತು. ಸೀಸರ್ ಜೈಂಟೈನ್ ತನ್ನ ಕಾನೂನು ಗ್ರಂಥದ ಪ್ರಸ್ತಾವನೆಯಲ್ಲಿ ಮರ್ಯಮ್(ಅ) ಅವರನ್ನು ತನ್ನ ಸಾಮ್ರಾಜ್ಯದ ಬೆಂಬಲಿಗಳು ಮತ್ತು ಸಹಾಯಕಳೆಂದು ವರ್ಣಿಸಿದ್ದಾನೆ. ಅವನ ಸುಪ್ರಸಿದ್ಧ ದಂಡನಾಯಕ ಗರ್‌ಸೀಸ್ ರಣಾಂಗಣದಲ್ಲಿ ಹ.ಮರ್ಯಮ್(ಅ) ಅವರ ಮಾರ್ಗದರ್ಶನಕ್ಕಾಗಿ ಬೇಡುತ್ತಾನೆ. ಪ್ರವಾದಿ ಮುಹಮ್ಮದ್(ಸ) ಅವರ ಸಮಕಾಲೀನ ಸೀಸರ್ ಹರ್ಕ್ಯುಲಿಸ್ ತನ್ನ ಧ್ವಜದಲ್ಲಿ ದೇವಮಾತೆಯ ಚಿತ್ರವನ್ನು ಬಿಡಿಸಿದ್ದನು. ಈ ಚಿತ್ರದ ಮಹಿಮೆಯಿಂದಾಗಿ ಆ ಧ್ವಜವು ಎಂದೂ ಕೀಳಾಗದು ಎಂದು ಆತ ನಂಬಿದ್ದನು. ಅನಂತರದ ಶತಮಾನಗಳಲ್ಲಿ ಪ್ರೊಟೆಸ್ಟೆಂಟ್ ಕ್ರೈಸ್ತರ ಸುಧಾರಣಾ ಚಳವಳಿಯಿಂದಾಗಿ ಕ್ರೈಸ್ತರಲ್ಲಿ ಮರ್ಯಮರ ಪೂಜೆಯ ವಿರುದ್ಧ ಬಂಡಾಯದ ಕಹಳೆ ಮೊಳಗಿತ್ತಾದರೂ ಕೆಥೋಲಿಕ್ ಚರ್ಚ್ ಇಂದಿಗೂ ಆ ವಿಶ್ವಾಸವನ್ನೇ ಅಪ್ಪಿಕೊಂಡಿದೆ.

## ಈಸಾ(ಅ) ತಾನು ದೇವಪುತ್ರನೆಂದು ಹೇಳಿರಲಿಲ್ಲ

ಹ.ಈಸಾ(ಅ) ಅವರು ತಮ್ಮನ್ನು ದೇವಪುತ್ರನೆಂದು ಹೇಳಿದ್ದರೆಂಬುದನ್ನು ನಿರಾಕರಿಸುವುದನ್ನು ಪವಿತ್ರ ಕುರ್‌ಆನ್ ಹೀಗೆ ಉಲ್ಲೇಖಿಸುತ್ತದೆ-

ಅಲ್ಲಾಹನು (ಈ ಅನುಗ್ರಹಗಳನ್ನು ನೆನಪಿಸುತ್ತಾ) ಹೇಳುವನು:

"(ಈ ಉಪಕಾರಗಳನ್ನೆಲ್ಲ ನೆನಪಿಸಿ) ಅಲ್ಲಾಹನು, 'ಓ ಮರ್ಯಮರ ಪುತ್ರ ಈಸಾ, ಅಲ್ಲಾಹನ ಹೊರತು ನನ್ನನ್ನೂ ನನ್ನ ಮಾತೆಯನ್ನೂ ದೇವರನ್ನಾಗಿ ಮಾಡಿಕೊಳ್ಳಿರೆಂದು ನೀವು ಜನರೊಡನೆ ಹೇಳಿದ್ದಿರಾ?' ಎಂದು ಕೇಳುವಾಗ ಅವರು ಉತ್ತರಿಸುವರು: ನೀನು ಪರಮ ಪಾವನನು. ನನಗೆ ಹೇಳಲು ಹಕ್ಕಿಲ್ಲದಂತಹ ಮಾತನ್ನು ಹೇಳುವ ಕಾರ್ಯ ನನ್ನದಾಗಿರಲಿಲ್ಲ. ನಾನು ಹಾಗೆ ಹೇಳಿರುತ್ತಿದ್ದರೆ ಅದು ಖಂಡಿತವಾಗಿಯೂ ನಿನಗೆ ತಿಳಿದಿರುತ್ತಿತ್ತು. ನನ್ನ ಮನಸ್ಸಿನಲ್ಲಿರುವುದು ನಿನಗೆ ಗೊತ್ತಿದೆ. ನಿನ್ನ ಮನಸ್ಸಿನಲ್ಲಿರುವುದು ನನಗೆ ಗೊತ್ತಿಲ್ಲ. ನೀನು ಸಕಲ ರಹಸ್ಯ ಪರಮಾರ್ಥಗಳ ಜ್ಞಾನಿಯಾಗಿರುತ್ತಿ. ನೀನು ನನಗೆ ನೀಡಿದ ಆಜ್ಞೆಯ ವಿನಾ ಇನ್ನೇನನ್ನೂ ನಾನು ಅವರಲ್ಲಿ ಹೇಳಿಲ್ಲ- ಅದು 'ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ' ಎಂದಾಗಿತ್ತು. ನಾನು ಅವರ ನಡುವೆ ವಾಸಿಸಿದ್ದ ಕಾಲದವರೆಗೆ ಮಾತ್ರ ನಾನು ಅವರ ಮೇಲ್ವಿಚಾರಕನಾಗಿದ್ದೆ. ನೀನು ನನ್ನನ್ನು ಹಿಂದಕ್ಕೆ ಕರೆಸಿಕೊಂಡ ಮೇಲೆ ನೀನೇ ಅವರ ಮೇಲ್ವಿಚಾರಕ ನಾಗಿರುತ್ತಿ ಮತ್ತು ನೀನಂತು ಸಕಲ ವಸ್ತುಗಳ ಮೇಲ್ನೋಟವಿರಿಸುವವನಾಗಿರುತ್ತಿ." (5:116-117)

ಪುನರುತ್ಥಾನ ದಿನ ಅಲ್ಲಾಹನ ಮುಂದೆ ಎಲ್ಲ ಮಾನವರೂ ಹಾಜರಾಗುವಾಗ ಅಲ್ಲಾಹನು ಈ ಭೂಮಿಯ ಮೇಲೆ ಮನುಷ್ಯರಲ್ಲಿದ್ದ ಎಲ್ಲ ವಿವಾದಗಳನ್ನೂ ಇತ್ಯರ್ಥ ಪಡಿಸುವನು. ಕ್ರೈಸ್ತರು ಹ.ಈಸಾ(ಅ) ಅವರನ್ನು ದೇವಪುತ್ರನೆಂದು ನಂಬಿ ಆರಾಧಿಸುತ್ತಿದ್ದ ಬಗ್ಗೆಯೂ ಅಲ್ಲಾಹನು ತೀರ್ಮಾನ ಮಾಡುವನು. ಆ ಸನ್ನಿವೇಶದ ಒಂದು ಚಿತ್ರಣವನ್ನು ಮೇಲಿನ ಸೂಕ್ತಗಳಲ್ಲಿ ಕೊಡಲಾಗಿದೆ. ಈಸಾ(ಅ) ಅವರು ತಮ್ಮನ್ನು ದೇವಪುತ್ರನೆಂದು ಸಾರಿದ್ದರೆಂದೂ ಆ ಪ್ರಕಾರ ನಾವು ಅವರನ್ನು ನಂಬಿ ಆರಾಧಿಸುತ್ತಿರುವೆವೆಂದೂ ಕ್ರೈಸ್ತರು ವಾದಿಸುತ್ತಾರೆ. ಈ ವಾದದ ಕುರಿತು ಅಲ್ಲಾಹನು ನೇರವಾಗಿ ಹ.ಈಸಾ(ಅ) ಅವರನ್ನು ವಿಚಾರಿಸುವನೆಂದೂ ಅವರು ಅದನ್ನು ಸ್ಪಷ್ಟವಾಗಿ ನಿರಾಕರಿಸುವರೆಂದೂ ಈ ಸೂಕ್ತಗಳು ತಿಳಿಸುತ್ತವೆ. ಹ.ಈಸಾ(ಅ) ಅವರಿಗೆ ಅವರನ್ನು ಅವರ ಅನುಯಾಯಿಗಳು ದೇವಪುತ್ರನೆಂದು ಸಾರಿ ಆರಾಧಿಸುತ್ತಿದ್ದುದು ಮತ್ತು ಅವರ ತಾಯಿಯನ್ನು ಅಲ್ಲಾಹನ ಜತೆ ಆರಾಧನೆಗೆ ಅರ್ಹರೆಂದು ಭಾವಿಸಿದ್ದುದು ತಿಳಿದೇ ಇರಲಾರದು. ಅವರು ಈ ವಿಷಯವನ್ನು ನಿರಾಕರಿಸಿ ತಾನು ಕೇವಲ ಅಲ್ಲಾಹನ ಪ್ರವಾದಿಯಾಗಿದ್ದು ಅವನನ್ನು ಮಾತ್ರ ಆರಾಧಿಸುತ್ತಿದ್ದುದಾಗಿಯೂ ಅವನನ್ನು ಮಾತ್ರ ಆರಾಧಿಸಲು ಜನರಿಗೆ ಕರೆ ನೀಡಿದ್ದುದಾಗಿಯೂ ಸಾಕ್ಷ್ಯವಹಿಸುವರು. ಮಾತ್ರವಲ್ಲ ಅವರ ಈ ಕೃತ್ಯಗಳಿಂದ ಸಂಪೂರ್ಣವಾಗಿ ತಮ್ಮ ಹೊಣೆ ಮುಕ್ತತೆಯನ್ನು ಘೋಷಿಸುವರೆಂದೂ ಈ ವಚನಗಳು ತಿಳಿಸುತ್ತವೆ.

## "ನನ್ನ ಮತ್ತು ನಿಮ್ಮ ಪ್ರಭು ಅಲ್ಲಾಹನಾಗಿರುವನು"

ಅಲ್ಲಾಹನನ್ನು ಪ್ರವಾದಿ ಈಸಾ(ಅ), "ನನ್ನ ಪ್ರಭು ಮತ್ತು ನಿಮ್ಮೆಲ್ಲರ ಪ್ರಭು" ಎಂದು ಘೋಷಿಸಿದ್ದರೇ ವಿನಾ "ನನ್ನ ತಂದೆ ಮತ್ತು ನಿಮ್ಮೆಲ್ಲರ ಪ್ರಭು"ವೆಂದು ಸಾರಿರಲೇ ಇಲ್ಲವೆಂದು ಪವಿತ್ರ ಕುರ್‌ಆನ್ ಖಚಿತವಾಗಿ ಹೇಳುತ್ತದೆ:

"ಈಸಾ ಪ್ರತ್ಯಕ್ಷ ನಿದರ್ಶನಗಳೊಂದಿಗೆ ಬಂದಾಗ ಹೇಳಿದ್ದರು, ನಾನು ನಿಮ್ಮ ಬಳಿಗೆ ಸದ್ವಿವೇಕವನ್ನು ತಂದಿದ್ದೇನೆ ಮತ್ತು ನೀವು ಪರಸ್ಪರ ಭಿನ್ನಾಭಿಪ್ರಾಯವಿಟ್ಟುಕೊಂಡಿರುವ ಕೆಲವು ವಿಷಯಗಳ ವಾಸ್ತವಿಕತೆಯನ್ನು ನಿಮ್ಮ ಮುಂದೆ ಪ್ರಕಟಗೊಳಿಸಲಿಕ್ಕಾಗಿ ಬಂದಿದ್ದೇನೆ. ಆದುದರಿಂದ ನೀವು ಅಲ್ಲಾಹನನ್ನೇ ಭಯಪಡಿರಿ ಮತ್ತು ನನ್ನನ್ನು ಅನುಸರಿಸಿರಿ. ವಾಸ್ತವದಲ್ಲಿ ಅಲ್ಲಾಹನೇ ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ. ನೀವು ಅವನನ್ನೇ ಆರಾಧಿಸಿರಿ, ಇದುವೇ ನೇರಮಾರ್ಗ." (43:63-64)

ಈಸಾ(ಅ) ಅವರು "ನಾನು ದೇವನಾಗಿರುವೆ ಅಥವಾ ದೇವಪುತ್ರನಾಗಿರುವೆ, ನೀವು ನನ್ನನ್ನು ಆರಾಧಿಸಿರಿ" ಎಂದು ಎಂದೂ ಹೇಳಿರಲೇ ಇಲ್ಲ. ಬದಲಾಗಿ ಅವರ ಸಂದೇಶವು ಇತರೆಲ್ಲ ಪ್ರವಾದಿಗಳ ಸಂದೇಶವೇ ಆಗಿತ್ತು. ಅಂತಿಮ ಪ್ರವಾದಿ ಹ.ಮುಹಮ್ಮದ್(ಸ) ಅವರು ಅದೇ ಸಂದೇಶವನ್ನು ಜನರ ಮುಂದಿಟ್ಟಿದ್ದರು. ಜಗತ್ತಿನ ಏಕೈಕ ಸೃಷ್ಟಿಕರ್ತನೂ ಒಡೆಯನೂ ಅಧಿಪತಿಯೂ ಆದ ಅಲ್ಲಾಹನೇ ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುವನು. ಆದ್ದರಿಂದ ನೀವು ಅವನ ದಾಸ್ಯ-ಆರಾಧನೆ ಮಾತ್ರ ಮಾಡಿರಿ, ಎಂಬುದೇ ಆ ಸಂದೇಶದ ತಿರುಳಾಗಿತ್ತು.

## ಈಸಾರನ್ನು(ಅ) ದೇವಪುತ್ರನೆನ್ನುವುದು

ಯಹೂದಿಗಳು ಮತ್ತು ಕ್ರೈಸ್ತರು ತಮ್ಮ ಮಹಾಪುರುಷರು ಮತ್ತು ಪ್ರವಾದಿಗಳನ್ನು ದೇವಪುತ್ರರೆನ್ನುವುದರ ಕುರಿತು ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

"ಉಝೈರ್ ದೇವಪುತ್ರನೆಂದು ಯಹೂದಿಯರು ಹೇಳುತ್ತಾರೆ. ಮಸೀಹ್ (ಈಸಾ) ದೇವಪುತ್ರನೆಂದು ಕ್ರೈಸ್ತರು ಹೇಳುತ್ತಾರೆ. ಅವರು ತಮಗಿಂತ ಹಿಂದೆ ಸತ್ಯನಿಷೇಧಿಗಳಾಗಿದ್ದವರನ್ನು ಅನುಕರಿಸುತ್ತ ತಮ್ಮ ಬಾಯಿಗಳಿಂದ ಹೊರಡಿಸುವ ಅಸಂಬದ್ಧ ಮಾತುಗಳಿವು. ದೇವನ ಪ್ರಹಾರವಿದೆ ಅವರ ಮೇಲೆ. ಅವರು ಎಲ್ಲಿಂದ ಮೋಸಹೋಗುತ್ತಿರುವರೋ! ಅವರು ಅಲ್ಲಾಹನ ಹೊರತು ತಮ್ಮ ವಿದ್ವಾಂಸರನ್ನೂ ಸಂತರನ್ನೂ ತಮ್ಮ ಪ್ರಭುಗಳನ್ನಾಗಿ ಮಾಡಿಕೊಂಡಿರುತ್ತಾರೆ. ಇದೇ ರೀತಿಯಲ್ಲಿ ಮರ್ಯಮರ ಪುತ್ರ ಮಸೀಹರನ್ನೂ (ಪ್ರಭುವಾಗಿ ಮಾಡಿಕೊಂಡಿದ್ದಾರೆ.) ವಸ್ತುತಃ ಅವರಿಗೆ ಏಕದೇವನನ್ನು ಹೊರತು ಇನ್ನಾರದೇ ದಾಸ್ಯ ಆರಾಧನೆಯನ್ನೂ ಮಾಡಲಿಕ್ಕೆ ಅಪ್ಪಣೆ ಕೊಡಲಾಗಿಲ್ಲ. ಆತನ ಹೊರತು ಅನ್ಯ-ಆರಾಧ್ಯರಾರೂ ಇಲ್ಲ. ಅವರಾಡುತ್ತಿರುವ ದೇವಸಹಭಾಗಿತ್ವ ಪರ ಮಾತುಗಳಿಂದ ಅವನು ಅತ್ಯಂತ ಪರಿಶುದ್ಧನು." (9:30-31)

ಉಝೈರ್ ಅಥವಾ ಎಝ್ರಾ (Ezra) ಎಂಬ ಓರ್ವ ಧರ್ಮ ಸುಧಾರಕನನ್ನು ಯಹೂದಿಗಳು ನಂಬುತ್ತಾರೆ. ಅವರ ಜೀವನ ಕಾಲವು ಕ್ರಿ.ಪೂ. 450. ಇಸ್ರಾಈಲರ ವರದಿಗಳ ಪ್ರಕಾರ ಹ.ಸುಲೈಮಾನ್(ಅ) ಅವರ ಕಾಲಾನಂತರ ಬನೀ ಇಸ್ರಾಈಲರ ಮೇಲೆ ಸಂಕಷ್ಟಗಳ ಸುರಿಮಳೆಯಾಗಿತ್ತು. ಆಗ ತೌರಾತ್ ಕಾಣೆಯಾಗಿತ್ತು. ಬೆಬಿಲೋನಿಯದಲ್ಲಿ ಬಂಧಿತರಾಗಿದ್ದ ಇಸ್ರಾಈಲ್ ಸಂತತಿಗಳು ತಮ್ಮ ಧರ್ಮಶಾಸ್ತ್ರ, ಆಚಾರ-ಸಂಪ್ರದಾಯಗಳು

ಮತ್ತು ತಮ್ಮ ಜನಾಂಗದ ಭಾಷೆಯಾದ ಹಿಬ್ರೂವನ್ನು ಮರೆತು ಬಿಟ್ಟಿದ್ದರು. ಕೊನೆಗೆ ಎಝ್ರಾ ಅವರು ಬೈಬಲ್‌ನ ಹಳೆಯ ಒಡಂಬಡಿಕೆಯನ್ನು ಕ್ರೋಡೀಕರಿಸಿದರು ಮತ್ತು ಅವರ ಧರ್ಮಶಾಸ್ತ್ರವನ್ನು ಜೀವಂತಗೊಳಿಸಿದರು. ಅದರಿಂದಾಗಿ ಯಹೂದಿಗಳು ಅವರನ್ನು ಬಹಳವಾಗಿ ಗೌರವಿಸುತ್ತಾರೆ. ಈ ಗೌರವ ಎಷ್ಟರ ಮಟ್ಟಿಗೆ ಹೆಚ್ಚಾಯಿತೆಂದರೆ ಕೆಲವು ಯಹೂದಿ ಗೋತ್ರಗಳು ಅವರನ್ನು ದೇವಪುತ್ರನೆಂದು ಸಾರಿಬಿಟ್ಟವು. ಪುರಾತನ ನಾಗರಿಕತೆಯ ಕೇಂದ್ರಗಳಾದ ಈಜಿಪ್ಟ್, ಗ್ರೀಸ್, ರೋಮ್, ಇರಾನ್ ಮತ್ತಿತರ ರಾಷ್ಟ್ರಗಳ ಪಥಭ್ರಷ್ಟ ಜನಾಂಗಗಳ ತತ್ವಶಾಸ್ತ್ರ, ಪುರಾಣಗಳು ಮತ್ತು ಮೂಢನಂಬಿಕೆಗಳಿಂದ ಪ್ರೇರಿತರಾಗಿ ಅವರು ಈ ರೀತಿಯ ಪಥಭ್ರಷ್ಟ ಸಿದ್ಧಾಂತಗಳನ್ನು ಆವಿಷ್ಕರಿಸಿದ್ದರು.

ಪ್ರವಾದಿ ಮುಹಮ್ಮದ್(ಸ) ಅವರ ಸಂಗಾತಿಗಳ ಪೈಕಿ ಅದಿಯ್ಯ್ ಬಿನ್ ಹಾತಿಮ್ ಎಂಬವರು ಮೊದಲು ಕ್ರೈಸ್ತರಾಗಿದ್ದರು. ಅವರು ಪ್ರವಾದಿಯವರ(ಸ) ಸನ್ನಿಧಿಗೆ ಬಂದು ಇಸ್ಲಾಮ್ ಸ್ವೀಕರಿಸಿದರು. ಈ ಸೂಕ್ತದಲ್ಲಿ, ಕ್ರೈಸ್ತರು ತಮ್ಮ ವಿದ್ವಾಂಸರನ್ನೂ ಸಂತರನ್ನೂ ದೇವರಾಗಿ ಮಾಡಿಕೊಂಡಿರುವರೆಂಬ ಆರೋಪ ಹೊರಿಸಲಾಗಿರುವ ಕುರಿತು ವಿಚಾರಿಸುತ್ತಾ ಅದರ ವಾಸ್ತವಿಕತೆ ಏನೆಂದು ತಿಳಿಯ ಬಯಸಿದರು. ಆಗ ಪ್ರವಾದಿ(ಸ) ಈ ರೀತಿ ಉತ್ತರಿಸಿದರು: ನಿಮ್ಮ ವಿದ್ವಾಂಸರು ಮತ್ತು ಪುರೋಹಿತರು ಯಾವುದನ್ನು ನಿಷಿದ್ಧವೆನ್ನುತ್ತಾರೋ ಅದನ್ನು ನೀವು ನಿಷಿದ್ಧವೆಂದು ಪರಿಗಣಿಸುತ್ತಿರಲಿಲ್ಲವೇ? ಅವರು ಯಾವುದನ್ನು, ಧರ್ಮಸಮ್ಮತವೆನ್ನುತ್ತಿದ್ದರೋ ಅದನ್ನು ನೀವು ಧರ್ಮಸಮ್ಮತವೆಂದು ಬಗೆಯುತ್ತಿರಲಿಲ್ಲವೇ? ಇದಕ್ಕೆ ಅದಿಯ್ಯ್ ಬಿನ್ ಹಾತಿಮ್(ರ) 'ಹೌದೆಂದು' ಉತ್ತರಿಸಿದಾಗ ಪ್ರವಾದಿ(ಸ) ಹೇಳಿದರು- "ಇದುವೇ ಅವರನ್ನು ದೇವರೆಂದು ಪರಿಗಣಿಸುವುದಾಗಿದೆ."

## ಮರ್ಯಮರ(ಅ) ಮೇಲೆ ಯಹೂದಿಗಳ ಆರೋಪ

ಮರ್ಯಮರ ಮೇಲೆ ಯಹೂದಿಗಳು ಆರೋಪ ಹೊರಿಸಿದುದರ ಬಗ್ಗೆ ಪವಿತ್ರ ಕುರ್‌ಆನಿನಲ್ಲಿ ಹೀಗಿದೆ:

"ಅವರು ತಮ್ಮ ನಿಷೇಧ ನೀತಿಯಲ್ಲಿ ಮುಂದುವರಿಯುತ್ತ ಮರ್ಯಮಳ ಮೇಲೆ ಉಗ್ರ ಸುಳ್ಳಾರೋಪವನ್ನು ಹೊರಿಸಿ ಬಿಟ್ಟರು." **(4:156)**

ಹ.ಈಸಾ(ಅ) ಅವರ ಜನನದ ಬಗ್ಗೆ ಯಹೂದಿ ಜನಾಂಗಕ್ಕೆ ಯಾವುದೇ ರೀತಿಯ ಸಂಶಯವಿರಲಿಲ್ಲ. ಯಹೂದಿಗಳ ಮುಂದೆ ಅವರು ಅಸಾಮಾನ್ಯ ವ್ಯಕ್ತಿತ್ವ ಹೊಂದಿದ್ದು ದಿವ್ಯ ಪವಾಡದ ಮೂಲಕವೇ ಅವರ ಜನನವಾಗಿದೆ ಎಂಬುದು ಅವರು ಹುಟ್ಟಿದ ದಿನವೇ ಸ್ಪಷ್ಟವಾಗಿತ್ತು. ಆದ್ದರಿಂದ ಅವರಿಗೆ ಈಸಾ(ಅ) ಅನೈತಿಕ ಸಂಬಂಧದಿಂದ ಹುಟ್ಟಿದವರೆಂಬ ಸಂಶಯ ಬರುವ ಸಾಧ್ಯತೆಯೇ ಇರಲಿಲ್ಲ. ಮರ್ಯಮ್‌ರು(ಅ) ಇಸ್ರೇಲ್ ಜನಾಂಗದ ಅತ್ಯಂತ ಗೌರವಾರ್ಹ ಮತ್ತು ಸುಪ್ರಸಿದ್ಧ ಧಾರ್ಮಿಕ ಮನೆತನಕ್ಕೆ ಸೇರಿದ ಓರ್ವ ಕನ್ಯಾಮಣಿ ಯಾಗಿದ್ದರು. ಆ ಕನ್ಯೆ ತನ್ನ ಮಡಿಲಲ್ಲಿ ಒಂದು ಶಿಶುವನ್ನು ಹೊತ್ತು ತಂದಾಗ ಯಹೂದಿಗಳ ಆಬಾಲ ವೃದ್ಧರು ಸಹಸ್ರಾರು ಸಂಖ್ಯೆಯಲ್ಲಿ ಅವರ ಮನೆಯ ಬಳಿ

ನೆರೆದರು. ಎಲ್ಲರೂ ಮರ್ಯಮರನ್ನು ನಾನಾ ರೀತಿಯಲ್ಲಿ ಪ್ರಶ್ನಿಸತೊಡಗಿದರು. ಹ.ಮರ್ಯಮ್(ಅ) ಅವರು ಅವರ ಪ್ರಶ್ನೆಗಳಿಗೆ ಉತ್ತರ ನೀಡುವ ಬದಲು ಮೌನವಾಗಿ ಆಗ ತಾನೆ ಹುಟ್ಟಿದ ಆ ಮಗುವಿನ ಕಡೆಗೆ ಬೆರಳು ತೋರಿಸುತ್ತಾ ಅದು ನಿಮಗೆ ಉತ್ತರ ನೀಡುವುದೆಂದು ಸಂಜ್ಞೆಯ ಮೂಲಕ ಹೇಳಿದರು. ಆಗ ನೆರೆದ ಜನಸ್ತೋಮವು ಆಶ್ಚರ್ಯಚಕಿತವಾಗಿ ತೊಟ್ಟಿಲಲ್ಲಿ ಮಲಗಿರುವ ಶಿಶುವಿನಲ್ಲಿ ನಾವೇನು ಕೇಳಬಲ್ಲೆವು ಎಂದಾಗ ಆ ಮಗು ಸ್ಪಷ್ಟವಾಗಿ ಮಾತಾಡುತ್ತಾ ಹೀಗೆ ಹೇಳಿತು: "ನಾನು ಅಲ್ಲಾಹನ ದಾಸನಾಗಿರುವೆನು. ಅವನು ನನಗೆ ಗ್ರಂಥ ನೀಡಿರುವನು ಮತ್ತು ನನ್ನನ್ನು ಪ್ರವಾದಿಯಾಗಿ ಮಾಡಿರುವನು."

ಈ ರೀತಿ ಅಲ್ಲಾಹನು ಈಸಾ(ಅ) ಅವರ ಜನನದ ಬಗೆಗಿನ ಎಲ್ಲ ಸಂಶಯಗಳನ್ನು ಶಾಶ್ವತವಾಗಿ ನಿವಾರಿಸಿದ್ದನು. ಆದ್ದರಿಂದಲೇ ಈಸಾ(ಅ) ಯುವಕರಾಗುವ ತನಕ ಯಾರೂ ಹ.ಮರ್ಯಮ್(ಅ) ಅವರ ಮೇಲೆ ವ್ಯಭಿಚಾರದ ಆರೋಪ ಹೊರಿಸಿರಲಿಲ್ಲ. ಈಸಾ(ಅ) ಅವರನ್ನು ಜಾರಪುತ್ರನೆಂದು ಅಣಕಿಸಲೂ ಇಲ್ಲ. ಆದರೆ ಮೂವತ್ತು ವರ್ಷ ವಯಸ್ಸಿನಲ್ಲಿ ಅವರು ಪ್ರವಾದಿತ್ವವನ್ನು ಘೋಷಿಸಿದಾಗ, ಯಹೂದಿಗಳ ದುರಾಚಾರಗಳ ಬಗ್ಗೆ ಅವರನ್ನು ವಿಮರ್ಶಿಸಿದಾಗ, ಅವರ ವಿದ್ವಾಂಸರ ಡಂಬಾಚಾರದ ಕುರಿತು ಟೀಕಿಸಿದಾಗ, ಅಲ್ಲಾಹನ ಧರ್ಮದ ಸಂಸ್ಥಾಪನೆಯ ಕಾರ್ಯದಲ್ಲಿ ಎಲ್ಲ ರೀತಿಯ ತ್ಯಾಗ ಬಲಿದಾನಗಳಿಗೆ ಸಿದ್ಧರಾಗುವಂತೆ ಅವರಿಗೆ ಕರೆ ನೀಡಿದಾಗ ಮತ್ತು ಎಲ್ಲ ರಂಗಗಳಲ್ಲೂ ಪೈಶಾಚಿಕ ಶಕ್ತಿಗಳ ವಿರುದ್ಧ ಹೋರಾಟ ಹೂಡಿದಾಗ ಈ ಸ್ವರವನ್ನು ಹತ್ತಿಕ್ಕಲಿಕ್ಕಾಗಿ ಯಹೂದಿಗಳು ಎಲ್ಲ ರೀತಿಯ ಕೆಟ್ಟ ಅಸ್ತ್ರಗಳನ್ನು ಬಳಸಿದರು. ಮೂವತ್ತು ವರ್ಷಗಳ ತನಕ ಅವರು ಹೇಳದೆ ಇದ್ದಂತಹ ಮಾತನ್ನು ಆಗ ಹೇಳಿದರು. ಮರ್ಯಮ್(ಅ) ಅವರನ್ನು ಶೀಲಗೆಟ್ಟವಳೆಂದೂ ಈಸಾ(ಅ) ಅವರನ್ನು ಜಾರ ಸಂತಾನವೆಂದೂ ಸಾರಿದರು (ಶಾಂತಂ ಪಾಪಂ). ವಸ್ತುತಃ ಈ ಪವಿತ್ರ ತಾಯಿ-ಮಗ ಇಬ್ಬರೂ ಈ ಕಳಂಕದಿಂದ ಶುದ್ಧವಾಗಿದ್ದಾರೆಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು. ಇದು ಅವರ ಮನದಲ್ಲಿದ್ದ ಯಾವುದೇ ರೀತಿಯ ಸಂಶಯದ ಕಾರಣ ದಿಂದಾಗಿರಲಿಲ್ಲ. ಇದು ಅವರು ಉದ್ದೇಶಪೂರ್ವಕವಾಗಿ ಸತ್ಯದ ವಿರುದ್ಧ ಮಾಡಿದ ಅಪ್ಪಟ ಸುಳ್ಳಾರೋಪವಾಗಿತ್ತು. ಆದ್ದರಿಂದಲೇ ಅಲ್ಲಾಹನು ಅವರ ಈ ಕೃತ್ಯವನ್ನು ಅನ್ಯಾಯ ಅಥವಾ ಸುಳ್ಳು ಎನ್ನುವ ಬದಲು ಸತ್ಯನಿಷೇಧವೆಂದಿರುವನು. ಏಕೆಂದರೆ ಈ ಆರೋಪದ ಮೂಲಕ ಅವರು ಅಲ್ಲಾಹನ ಸತ್ಯಧರ್ಮದ ಹಾದಿಯನ್ನು ತಡೆಯಬಯಸಿದ್ದರು. ಓರ್ವ ನಿರ್ದೋಷಿ ಮಹಿಳೆಯ ಮೇಲಿನ ಆರೋಪವು ಕೇವಲ ನೆಪವಾಗಿತ್ತು.

## ಈಸಾರನ್ನು(ಅ) ಕೊಲೆ ಮಾಡಿದ್ದೇವೆಂಬ ಅವರ ಹೇಳಿಕೆ

ನಾವು ಅಲ್ಲಾಹನ ಪ್ರವಾದಿಯಾಗಿರುವ ಮರ್ಯಮರ ಪುತ್ರ ಈಸಾ(ಅ) ಅವರನ್ನು ವಧಿಸಿರುವೆವೆಂದು ಯಹೂದಿಗಳು ಹೇಳಿಕೊಳ್ಳುತ್ತಾರೆ. ಪವಿತ್ರ ಕುರ್‌ಆನ್ ಈ ವಿಷಯವನ್ನು ಹೀಗೆ ಪ್ರಸ್ತಾಪಿಸಿದೆ:

"ಮತ್ತು ನಾವು ಅಲ್ಲಾಹನ ಸಂದೇಶವಾಹಕರಾದ ಮರ್ಯಮರ ಪುತ್ರ ಈಸಾ ಮಸೀಹರನ್ನು ವಧಿಸಿದೆವೆಂದು ಅವರು ಹೇಳಿದರು. ವಸ್ತುತಃ ಅವರು ಅವರನ್ನು (ಈಸಾರನ್ನು) ವಧಿಸಲೂ ಇಲ್ಲ, ಶಿಲುಬೆಗೇರಿಸಲೂ ಇಲ್ಲ. ನಿಜವಾಗಿ ಆ ಪ್ರಕರಣವು ಅವರಿಗೆ ಅಸ್ಪಷ್ಟಗೊಳಿಸಲಾಯಿತು. ಈ ವಿಷಯದಲ್ಲಿ ಭಿನ್ನಾಭಿಪ್ರಾಯ ತೋರಿದವರೂ ವಾಸ್ತವದಲ್ಲಿ ಸಂಶಯಗ್ರಸ್ತರಾಗಿರುತ್ತಾರೆ. ಅವರಿಗೆ ಈ ಪ್ರಕರಣದ ಅರಿವೇನೂ ಇಲ್ಲ. ಕೇವಲ ಗುಮಾನಿಯನ್ನೇ ಅನುಸರಿಸಲಾಗುತ್ತಿದೆ. ಅವರು ಮಸೀಹರನ್ನು ಖಂಡಿತವಾಗಿಯೂ ವಧಿಸಲಿಲ್ಲ. ನಿಜವಾಗಿ ಅಲ್ಲಾಹನು ಅವರನ್ನು ತನ್ನ ಕಡೆಗೆ ಎತ್ತಿಕೊಂಡನು. ಅಲ್ಲಾಹ್ ಮಹಾ ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುತ್ತಾನೆ." (4:157-158)

ಇಸ್ರಾಈಲ್ ಜನಾಂಗದ ಅಪರಾಧ ಪ್ರವೃತ್ತಿ ಎಷ್ಟು ಪ್ರಬಲವಾಗಿತ್ತೆಂದರೆ ಅಲ್ಲಾಹನ ಪ್ರವಾದಿಯನ್ನು ಪ್ರವಾದಿಯೆಂದು ತಿಳಿದೂ ಅವರನ್ನು ಕೊಲ್ಲಲು ಮುಂದಾದರು. ಮಾತ್ರವಲ್ಲ ನಾವು ಅವರನ್ನು ವಧಿಸಿಬಿಟ್ಟಿದ್ದೇವೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಈಸಾ(ಅ) ಅವರು ಶಿಶುವಾಗಿ ತೊಟ್ಟಿಲಲ್ಲಿರುವಾಗಲೇ ತಮ್ಮ ಅದ್ಭುತ ಪವಾಡಸದೃಶ ಜನನದ ಮತ್ತು ಪ್ರವಾದಿತ್ವದ ನಿರಾಕರಿಸಲಾಗದ ಪವಾಡವನ್ನು ಇಸ್ರಾಈಲ್ ಜನಾಂಗದ ಮುಂದೆ ಇರಿಸಿದ್ದರು. ಆ ಬಳಿಕ ಯಹೂದಿಗಳಿಗೆ ಅವರ ಪ್ರವಾದಿತ್ವದ ಬಗ್ಗೆ ಯಾವುದೇ ಸಂಶಯಕ್ಕೆ ಆಸ್ಪದವೇ ಇರಲಿಲ್ಲ. ಅವರು ಬೆಳೆದು ದೊಡ್ಡವರಾದ ಬಳಿಕ ಕುಷ್ಠರೋಗಿಗಳನ್ನು ಮತ್ತು ಕುರುಡರನ್ನು ಗುಣಪಡಿಸುವ, ಮಣ್ಣಿನಿಂದ ಹಕ್ಕಿಯ ಆಕೃತಿ ಮಾಡಿ ಅದರಲ್ಲಿ ಜೀವ ತುಂಬುವ, ಮೃತರನ್ನು ಜೀವಂತಗೊಳಿಸುವ ಮತ್ತು ಅದೃಶ್ಯ ವಿಷಯಗಳನ್ನು ತಿಳಿಸುವಂತಹ ಪವಾಡ ಗಳನ್ನು ಇಸ್ರಾಈಲ್ ಜನಾಂಗದ ಮುಂದಿರಿಸಿದ್ದರು. ಇವುಗಳನ್ನು ಕಂಡ ಬಳಿಕವಂತೂ ಅವರು ಅಲ್ಲಾಹನ ಸಂದೇಶವಾಹಕರಾಗಿರುವ ಬಗ್ಗೆ ಅವರಿಗೆ ಒಂದಿನಿತೂ ಅನುಮಾನ ಉಳಿದಿರಲಿಲ್ಲ. ಆದ್ದರಿಂದ ಯಹೂದಿಗಳು ಯಾವುದೇ ತಪ್ಪುಕಲ್ಪನೆಯ ಕಾರಣದಿಂದಾಗಿ ಈಸಾ(ಅ) ಅವರ ಕೊಲೆ ಮಾಡಲು ಮುಂದಾದುದಲ್ಲ. ತಾವು ಕೊಲ್ಲಲು ಪ್ರಯತ್ನಿಸುತ್ತಿ ರುವುದು ಅಲ್ಲಾಹನ ವತಿಯಿಂದ ಸಂದೇಶವಾಹಕರಾಗಿ ಬಂದ ವ್ಯಕ್ತಿಯನ್ನೇ ಎಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು.

ಒಬ್ಬ ವ್ಯಕ್ತಿಯನ್ನು ಅಲ್ಲಾಹನ ಪ್ರವಾದಿಯೆಂದು ಚೆನ್ನಾಗಿ ತಿಳಿದ ಬಳಿಕವೂ ಒಂದು ಜನಾಂಗವು ಅವರನ್ನು ಕೊಲ್ಲುವುದೆಂದರೆ ಅದು ನಿಜಕ್ಕೂ ಬಹಳ ವಿಚಿತ್ರವಾದ ವಿಷಯ. ಆದರೆ ಕೆಟ್ಟುಹೋದ ಜನಾಂಗಗಳ ರೀತಿ-ನೀತಿಗಳೇ ವಿಚಿತ್ರವಾಗಿರುತ್ತವೆ. ತಮ್ಮನ್ನು ತಮ್ಮ ಕೆಡುಕುಗಳಿಗಾಗಿ ವಿಮರ್ಶಿಸುವ ಮತ್ತು ತಮ್ಮ ಧರ್ಮಬಾಹಿರ ಕಾರ್ಯಗಳಿಂದ ತಮ್ಮನ್ನು ತಡೆಯುವ ವ್ಯಕ್ತಿಯನ್ನು ಅವರು ತಮ್ಮ ಮಧ್ಯೆ ಎಂದೂ ಸಹಿಸುವುದಿಲ್ಲ. ಇಂತಹ ವ್ಯಕ್ತಿಗಳು ಸುಧಾರಕರಾಗಿರಲಿ, ಮಹಾಪುರುಷರಾಗಿರಲಿ ಅಥವಾ ಅಲ್ಲಾಹನ ಪ್ರವಾದಿಗಳೇ ಆಗಿರಲಿ ಕೆಟ್ಟು ಹೋದ ಜನಾಂಗಗಳು ಅವರನ್ನು ಸೆರೆಮನೆಗೆ ತಳ್ಳುವ, ಅವರಿಗೆ ಮಾನಸಿಕ ಮತ್ತು ದೈಹಿಕ ಹಿಂಸೆ ಕೊಡುವ ಹಾಗೂ ಅವರನ್ನು ಕೊಲೆಮಾಡುವ ವರೆಗೂ ಮುಂದುವರಿಯುತ್ತವೆ.

ತಲ್ಮೂದ್‌ನ ವರದಿಯ ಪ್ರಕಾರ, ನಬೂಕದ್ನಸರ್ ಬೈತುಲ್ ಮಕ್ದಿಸನ್ನು ಜಯಿಸಿದಾಗ ಹೈಕಲ್ ಸುಲೈಮಾನಿಗೆ ಪ್ರವೇಶಿಸಿ ಅಲ್ಲಿ ವಿಹಾರಕ್ಕೆ ಹೊರಟನು. ಬಲಿ ಪೀಠದ ಮುಂದೆ ಒಂದು ಗೋಡೆಯಲ್ಲಿ ಅವನಿಗೆ ಬಾಣದ ಗುರುತು ಕಾಣಿಸಿತು. ಇದೆಂತಹ ಗುರುತು ಎಂದು ಅವನು ಯಹೂದಿಯರಲ್ಲಿ ವಿಚಾರಿಸಿದನು. ಅವರು ಹೇಳಿದರು: "ಇಲ್ಲಿ ನಾವು ಪ್ರವಾದಿ ಝಕರಿಯ್ಯಾರನ್ನು ಕೊಂದಿದ್ದೆವು. ಅವರು ನಮ್ಮ ಕೆಡುಕಿಗಾಗಿ ನಮ್ಮನ್ನು ಆಕ್ಷೇಪಿಸುತ್ತಿದ್ದರು. ಅವರ ಆಕ್ಷೇಪಗಳಿಂದ ರೋಸಿ ಹೋಗಿ ನಾವು ಅವರನ್ನು ಕೊಂದೇಬಿಟ್ಟೆವು."

ಪ್ರವಾದಿ ಯರ್ಮಿಯಾ ಅವರ ಕುರಿತು ಬೈಬಲ್‌ನ ವರದಿಯ ಪ್ರಕಾರ ಇಸ್ರಾಈಲ್ ಜನಾಂಗದ ಅನೈತಿಕತೆಗಳು ಮಿತಿಮೀರಿದಾಗ "ನಿಮ್ಮನ್ನು ಈ ಕೆಡುಕುಗಳಿಗಾಗಿ ಅಲ್ಲಾಹನು ಇತರ ಜನಾಂಗಗಳ ಮೂಲಕ ತುಳಿತಕ್ಕೆ ಗುರಿಪಡಿಸುವನು" ಎಂದು ಅವರನ್ನು ಯರ್ಮಿಯಾ ಎಚ್ಚರಿಸಿದರು. ಆಗ ಅವರು "ಈ ವ್ಯಕ್ತಿ ಕಸದಿಗಳ ಜತೆ ಸೇರಿರುವನು ಮತ್ತು ದೇಶದ್ರೋಹಿ ಯಾಗಿರುವನು" ಎನ್ನುತ್ತಾ ಅವರನ್ನು ಸೆರೆಮನೆಗೆ ತಳ್ಳಿದರು.

ಪ್ರವಾದಿ ಈಸಾ(ಅ) ಅವರ ತಥಾಕಥಿತ ಶಿಲುಬೆಯ ಪ್ರಕರಣಕ್ಕಿಂತ ಎರಡೂವರೆ ವರ್ಷ ಮೊದಲು ಹ.ಯಹ್ಯಾ(ಅ) ಅವರ ಘಟನೆಯೂ ನಡೆದಿತ್ತು. ಹೆಚ್ಚಿನ ಯಹೂದಿಗಳು ಅವರನ್ನು ಪ್ರವಾದಿಯೆಂದು ತಿಳಿದಿದ್ದರು. ಅವರ ಪ್ರವಾದಿತ್ವದ ಮೇಲೆ ವಿಶ್ವಾಸವಿಡದವರು ಕೂಡಾ ಅವರು ತಮ್ಮ ಜನಾಂಗದ ಅತ್ಯಂತ ಸಜ್ಜನ ವ್ಯಕ್ತಿಯೆಂಬುದನ್ನಂತೂ ಒಪ್ಪುತ್ತಿದ್ದರು. ಆದರೆ ಅವರು ಹಿರೋದೇಶ್ ಎಂಬ ಯಹೂದಿ ರಾಜನ ಆಸ್ಥಾನದಲ್ಲಿ ನಡೆಯುವ ಕೆಡುಕುಗಳ ಬಗ್ಗೆ ವಿಮರ್ಶಿಸಿದಾಗ ಅದು ಅವರಿಗೆ ಸಹ್ಯವಾಗಲಿಲ್ಲ. ಮೊದಲು ಅವರನ್ನು ಸೆರೆಮನೆಗೆ ಹಾಕಿದರು. ಅನಂತರ ರಾಜನ ಪ್ರೇಯಸಿಯ ಬೇಡಿಕೆಯಂತೆ ಅವರ ಶಿರಚ್ಛೇದ ಮಾಡಲಾಯಿತು.

ಯಹೂದಿಗಳ ಈ ಐತಿಹಾಸಿಕ ದಾಖಲೆಗಳನ್ನು ನೋಡಿದ ನಂತರ ಪ್ರವಾದಿ ಈಸಾ(ಅ) ಅವರನ್ನು ಅವರ ಹೇಳಿಕೆಯ ಪ್ರಕಾರ, ಶಿಲುಬೆಗೇರಿಸಿದ ನಂತರ ಎದೆತಟ್ಟಿ "ನಾವು ಅಲ್ಲಾಹನ ಪ್ರವಾದಿಯನ್ನು ವಧಿಸಿದ್ದೇವೆ" ಎಂದು ಹೇಳಿದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

## ಈಸಾರ(ಅ) ಆರೋಹಣ

ಮೇಲಿನ ಕುರ್‌ಆನ್ ವಚನದಿಂದ ಸ್ಪಷ್ಟವಾಗುವಂತೆ ಈಸಾ(ಅ) ಅವರು ಶಿಲುಬೆಗೇರಿ ಸಲ್ಪಡುವ ಮೊದಲೇ ಎತ್ತಲ್ಪಟ್ಟಿದ್ದರು. ಹ.ಈಸಾ(ಅ) ಅವರನ್ನು ಶಿಲುಬೆಗೇರಿಸಲಾಯಿ ತೆಂಬುದು ಯಹೂದಿಗಳ ಮತ್ತು ಕ್ರೈಸ್ತರ ಕೇವಲ ತಪ್ಪು ತಿಳುವಳಿಕೆಯಾಗಿದೆ. ಈ ಬಗ್ಗೆ ಪವಿತ್ರ ಕುರ್‌ಆನ್ ಮತ್ತು ಬೈಬಲ್‌ನಲ್ಲಿ ಬಂದಿರುವ ಉಲ್ಲೇಖಗಳನ್ನು ತುಲನಾತ್ಮಕವಾಗಿ ಅಭ್ಯಸಿಸಿದಾಗ ತಿಳಿದುಬರುವುದೇನೆಂದರೆ ಪಿಲಾತನ ಆಸ್ಥಾನದಲ್ಲಿ ಈಸಾ(ಅ) ಅವರನ್ನು ಹಾಜರುಪಡಿಸಲಾಗಿತ್ತು. ಆತ ಅವರಿಗೆ ಮರಣದಂಡನೆಯನ್ನು ಘೋಷಿಸಿದಾಗ ಮತ್ತು

ಯಹೂದಿಗಳು ಈಸಾ(ಅ) ಅವರಂತಹ ಪುಣ್ಯಾತ್ಮನನ್ನು ಓರ್ವ ದರೋಡೆಕೋರನಿಗಿಂತಲೂ ಕೀಳೆಂದು ಭಾವಿಸಿ ತಮ್ಮ ಧರ್ಮವಿರೋಧವನ್ನು ಸಾಬೀತುಪಡಿಸಿದಾಗ ಅಲ್ಲಾಹನು ಅವರನ್ನು ಪವಾಡಸದೃಶವಾಗಿ ಜೀವಂತ ಎತ್ತಿಕೊಂಡನು. ಅನಂತರ ಯಹೂದಿಗಳು ಶಿಲುಬೆಗೇರಿಸಿದ್ದು ಹ.ಈಸಾ(ಅ) ಅವರನ್ನಾಗಿರಲಿಲ್ಲ. ಆತ ಇನ್ನೊಬ್ಬ ವ್ಯಕ್ತಿಯಾಗಿದ್ದನು. ಅವನನ್ನು ಯಹೂದಿಗಳು ಏಕೆ ಈಸಾ(ಅ) ಎಂದು ಭಾವಿಸಿದರು ಎಂಬುದು ಸ್ಪಷ್ಟವಾಗಿಲ್ಲ. ಆದರೆ ಇದರಿಂದ ಯಹೂದಿಗಳ ಅಪರಾಧದ ಭೀಕರತೆಯು ಏನೇನೂ ಕಡಿಮೆಯಾಗುವುದಿಲ್ಲ. ಏಕೆಂದರೆ ಆ ವ್ಯಕ್ತಿಯನ್ನು ಈಸಾ(ಅ) ಎಂದು ಭಾವಿಸಿಯೇ ಆತನಿಗೆ ಅವರು ಮುಳ್ಳಿನ ಕಿರೀಟವನ್ನು ತೊಡಿಸಿದ್ದರು. ಅವನ ಮುಖಕ್ಕೆ ಉಗುಳಿದ್ದರು. ಹೀನಾಯವಾಗಿ ಅವನನ್ನು ಶಿಲುಬೆಗೇರಿಸಿದ್ದರು. ಈ ಪ್ರಕರಣವು ಯಾವ ರೀತಿ ಅವರ ಪಾಲಿಗೆ ಸಂಶಯಾಸ್ಪದ ವಾಯಿತೆಂಬುದನ್ನು ತಿಳಿಯುವ ಯಾವ ಮೂಲವೂ ನಮ್ಮ ಬಳಿಯಿಲ್ಲ. ಈ ಬಗ್ಗೆ ಯಾವುದೇ ಖಚಿತ ಮಾಹಿತಿ ನಮಗೆ ಲಭ್ಯವಿಲ್ಲ. ಈಸಾ(ಅ) ಅವರು ಯಹೂದಿಗಳ ಕೈಯಿಂದ ಪಾರಾದ ನಂತರವೂ ಅವರಿಗೆ ಯಾವನೋ ಒಬ್ಬ ವ್ಯಕ್ತಿಯ ಬಗ್ಗೆ ಅವನು ಈಸಾ(ಅ) ಆಗಿದ್ದಾರೆಂಬ ಸಂಶಯ ಬಂದುದು ಮತ್ತು ಅವನನ್ನು ಗಲ್ಲಿಗೇರಿಸಿ ತಾವು ಈಸಾ(ಅ) ಅವರನ್ನು ಗಲ್ಲಿಗೇರಿಸಿರುವೆವೆಂದು ಅವರು ಭಾವಿಸಿದುದು ಏಕೆ ಎಂಬುದರ ಬಗ್ಗೆ ಕೇವಲ ಗುಮಾನಿ ಮತ್ತು ವದಂತಿಗಳ ಆಧಾರದಲ್ಲಿ ನಾವೇನೂ ಹೇಳುವ ಹಾಗಿಲ್ಲ.

ಕ್ರೈಸ್ತರಲ್ಲಿಯೂ ಈಸಾ(ಅ) ಅವರನ್ನು ಶಿಲುಬೆಗೇರಿಸಿದ ಘಟನೆಯ ಬಗ್ಗೆ ಯಾವುದೇ ಸರ್ವಸಮ್ಮತ ಅಭಿಪ್ರಾಯವಿಲ್ಲ. ಈ ಬಗ್ಗೆ ಹತ್ತಾರು ಹೇಳಿಕೆಗಳಿವೆ. ಇವುಗಳಿಂದ ಕ್ರೈಸ್ತರು ಈ ವಿಷಯದಲ್ಲಿ ಸಂಶಯಗ್ರಸ್ತರಾಗಿದ್ದಾರೆಂಬುದು ವ್ಯಕ್ತವಾಗುತ್ತದೆ. ಕೆಲವರ ಪ್ರಕಾರ ಗಲ್ಲಿಗೇರಿಸಲ್ಪಟ್ಟವರು ಈಸಾ(ಅ) ಆಗಿರಲಿಲ್ಲ. ಈಸಾ(ಅ) ಅವರಂತಹ ರೂಪವಿರುವ ಇನ್ನೊಬ್ಬ ವ್ಯಕ್ತಿಯಾಗಿದ್ದರು. ಆತನನ್ನು ಯಹೂದಿಗಳು ಮತ್ತು ರೋಮನ್ ಸೈನಿಕರು ಅಪಮಾನಕರ ರೀತಿಯಲ್ಲಿ ಗಲ್ಲಿಗೇರಿಸುವಾಗ ಈಸಾ(ಅ) ಅಲ್ಲೇ ಒಂದು ಕಡೆ ನಿಂತು ಅವರ ಈ ಮೂರ್ಖತನದ ಬಗ್ಗೆ ನಗುತ್ತಿದ್ದರು. ಇನ್ನು ಕೆಲವರ ಪ್ರಕಾರ, ಈಸಾ(ಅ) ಅವರನ್ನು ಶಿಲುಬೆಗಂತೂ ಏರಿಸಲಾಗಿತ್ತು. ಆದರೆ ಅವರು ಶಿಲುಬೆಯಲ್ಲಿ ಕೊನೆಯುಸಿರೆಳೆದಿರಲಿಲ್ಲ. ಅವರನ್ನು ಕೆಳಗಿಳಿಸಿದಾಗ ಅವರು ಜೀವಂತವಾಗಿದ್ದರು. ಮತ್ತೆ ಕೆಲವರ ಹೇಳಿಕೆಯಂತೆ, ಅವರು ಶಿಲುಬೆಯಲ್ಲೇ ಮೃತರಾದರು. ಆದರೆ ಅನಂತರ ಜೀವಂತರಾಗಿ ಸುಮಾರು ಹತ್ತು ಸಲ ತಮ್ಮ ಬೇರೆ ಬೇರೆ ಶಿಷ್ಯರೊಂದಿಗೆ ಭೇಟಿಯಾಗಿ ಮಾತನಾಡಿದರು. ಕೆಲವರ ಅಭಿಪ್ರಾಯದಂತೆ, ಈಸಾ(ಅ) ಅವರಿಗೆ ಶಿಲುಬೆಯಲ್ಲೇ ಮರಣ ಬಂದಿತ್ತು ಮತ್ತು ಅವರನ್ನು ದಫನ ಮಾಡಲಾಗಿತ್ತು. ಆದರೆ ಅವರಲ್ಲಿದ್ದ ದೇವಾತ್ಮವು ಆಕಾಶಕ್ಕೆ ಏರಿಸಲ್ಪಟ್ಟಿತು. ಇನ್ನು ಕೆಲವರ ಪ್ರಕಾರ, ಈಸಾ(ಅ) ಅವರ ಮರಣದ ಬಳಿಕ ಅವರು ಶರೀರ ಸಮೇತ ಜೀವಂತರಾಗಿದ್ದರು ಮತ್ತು ಶರೀರ ಸಹಿತವೇ ಅವರನ್ನು ಆಕಾಶಕ್ಕೆ ಏರಿಸಲಾಯಿತು. ಕ್ರೈಸ್ತರ ಬಳಿ ಈ ಬಗ್ಗೆ ಖಚಿತವಾದ ತಿಳುವಳಿಕೆಯಿರುತ್ತಿದ್ದರೆ ಇಷ್ಟು ವಿಭಿನ್ನ ಅಭಿಪ್ರಾಯಗಳು ಅವರಲ್ಲಿ ವ್ಯಾಪಿಸುತ್ತಿರಲಿಲ್ಲವೆಂಬುದು ವ್ಯಕ್ತ.

ಕುರ್‌ಆನ್ ಈ ವಿಷಯದಲ್ಲಿ ಒಂದು ಮಾತನ್ನು ಸ್ಪಷ್ಟವಾಗಿ ಹೇಳಿದೆ. ಅದೇನೆಂದರೆ ಯಹೂದಿಗಳು ಈಸಾ(ಅ) ಅವರನ್ನು ವಧಿಸುವುದರಲ್ಲಿ ಸಫಲರಾಗಲಿಲ್ಲ ಮತ್ತು ಅಲ್ಲಾಹನು ಅವರನ್ನು ತನ್ನ ಕಡೆಗೆ ಎತ್ತಿಕೊಂಡನು. ಇನ್ನು ಎತ್ತಲ್ಪಟ್ಟದ್ದು ಹೇಗೆ ಎಂಬ ಪ್ರಶ್ನೆ. ಆ ಬಗ್ಗೆ ಕುರ್‌ಆನಿನಲ್ಲಿ ಯಾವುದೇ ವಿವರಣೆಯಿಲ್ಲ. ಅವರನ್ನು ಶರೀರ ಮತ್ತು ಆತ್ಮ ಸಹಿತ ಭೂಮುಖದಿಂದ ಎತ್ತಿ ಆಕಾಶಲೋಕದಲ್ಲೆಲ್ಲೋ ಕೊಂಡೊಯ್ಯಲಾಯಿತೆಂದು ಪವಿತ್ರ ಕುರ್‌ಆನ್ ಹೇಳುವುದಿಲ್ಲ. ಅದೇ ರೀತಿ ಅವರಿಗೆ ಸಹಜ ಮರಣ ನೀಡಿ ಕೇವಲ ಅವರ ಆತ್ಮವನ್ನು ಎತ್ತಿಕೊಳ್ಳಲಾಯಿತೆಂದೂ ಅದು ತಿಳಿಸುವುದಿಲ್ಲ. ಆದ್ದರಿಂದ ಕುರ್‌ಆನಿನ ಆಧಾರದಲ್ಲಿ ಈ ಎರಡರ ಪೈಕಿ ಯಾವುದನ್ನು ಸ್ವೀಕರಿಸುವಂತೆಯೂ ಇಲ್ಲ. ನಿರಾಕರಿಸು ವಂತೆಯೂ ಇಲ್ಲ. ಆದರೆ ಆರೋಹಣದ ರೂಪ ಯಾವುದಾಗಿದ್ದರೂ ಒಂದು ವಿಷಯ ಮಾತ್ರ ಸ್ಪಷ್ಟವಿದೆ. ಅಲ್ಲಾಹನು ಅವರ ಜತೆ ಅಸಾಮಾನ್ಯ ರೀತಿಯಲ್ಲಿ ವ್ಯವಹರಿಸಿದ್ದಾನೆ. ಈ ಅಸಾಮಾನ್ಯ ರೂಪವು ಈ ಕೆಳಗಿನ ಮೂರು ಅಂಶಗಳಿಂದ ವ್ಯಕ್ತವಾಗುತ್ತದೆ:

1) ಈಸಾ(ಅ) ಅವರು ಶರೀರ ಮತ್ತು ಆತ್ಮ ಸಮೇತ ಎತ್ತಲ್ಪಟ್ಟರೆಂಬ ವಿಶ್ವಾಸವು ಕ್ರೈಸ್ತರಲ್ಲಿ ಹಿಂದಿನಿಂದಲೇ ಇತ್ತು. ಈ ನಂಬಿಕೆಯ ಕಾರಣದಿಂದಾಗಿಯೇ ಕ್ರೈಸ್ತರ ಒಂದು ದೊಡ್ಡ ವಿಭಾಗವು ಈಸಾ(ಅ) ಅವರ ದೇವತ್ವದ ಮೇಲೆ ವಿಶ್ವಾಸವಿರಿಸಿತ್ತು. ಆದರೂ ಪವಿತ್ರ ಕುರ್‌ಆನ್ ಅದನ್ನು ಸ್ಪಷ್ಟವಾಗಿ ನಿರಾಕರಿಸಲಿಲ್ಲ. ಬದಲಾಗಿ ಅದು 'ರಫಅ' ಎಂಬ ಪದವನ್ನೇ ಅದಕ್ಕೆ ಬಳಸಿದೆ. ಇದೇ ಅರ್ಥದ Ascension (ಆರೋಹಣ) ಎಂಬ ಪದವನ್ನೇ ಕ್ರೈಸ್ತರು ಈ ಘಟನೆಗಾಗಿ ಬಳಸುತ್ತಾರೆ. ಪ್ರಸ್ತುತ ಆರೋಹಣದ ನಂಬಿಕೆಯನ್ನು ಅಲ್ಲಗಳೆಯ ಬೇಕಾಗಿದ್ದರೆ ಪವಿತ್ರ ಕುರ್‌ಆನ್ ಇಂತಹ ಭಾಷೆಯನ್ನು ಬಳಸುತ್ತಿರಲಿಲ್ಲ.

2) ಈಸಾ(ಅ) ಅವರ ಎತ್ತಲ್ಪಡುವಿಕೆಯು ಪ್ರತಿಯೊಬ್ಬ ವ್ಯಕ್ತಿಯ ಮರಣದ ಬಳಿಕ ನಡೆಯುವ ಸಾಮಾನ್ಯ ಎತ್ತಲ್ಪಡುವಿಕೆಯೇ ಆಗಿದ್ದರೆ ಅಥವಾ ಅದರ ಉದ್ದೇಶ ಅವರ ಸ್ಥಾನಮಾನವನ್ನು ಉನ್ನತಗೊಳಿಸುವುದು ಎಂದಾಗಿದ್ದರೆ ಈ ಹಿಂದೆ ಪವಿತ್ರ ಕುರ್‌ಆನಿನಲ್ಲಿ ಇದ್ರೀಸ್(ಅ) ಅವರ ಕುರಿತು ಬಳಸಿದಂತಹ ಪದಗಳನ್ನೇ ಅದಕ್ಕೂ ಬಳಸಲಾಗುತ್ತಿತ್ತು.

3) "ದೇವರು ಅವನನ್ನು ಎತ್ತಿಕೊಂಡನು" ಎಂದು ಸಾಮಾನ್ಯವಾಗಿ ನಾವು ಮರಣ ಹೊಂದಿದವರ ಬಗ್ಗೆ ಹೇಳುವಂತೆಯೇ ಈ ಎತ್ತಿಕೊಳ್ಳುವಿಕೆಯಾಗಿದ್ದರೆ ಪ್ರಸ್ತುತ ಕುರ್‌ಆನ್ ವಚನದ ಕೊನೆಯಲ್ಲಿ "ಅಲ್ಲಾಹನು ಮಹಾ ಪ್ರತಾಪಶಾಲಿಯೂ ಯುಕ್ತಿಪೂರ್ಣನೂ ಆಗಿರುತ್ತಾನೆ" ಎಂದು ಹೇಳುವ ಅಗತ್ಯವೇ ಇರಲಿಲ್ಲ. ಅಲ್ಲಾಹನ ಮಹಾನ್ ಸಾಮರ್ಥ್ಯ ಮತ್ತು ಅಸಾಮಾನ್ಯ ಯುಕ್ತಿಯ ಮೂಲಕ ನಡೆದ ಘಟನೆಯ ಕುರಿತು ಮಾತ್ರ ಇಂತಹ ಮಾತು ಸಂದರ್ಭೋಚಿತವೆನಿಸುತ್ತದೆ.

## ಮಕ್ಕಾದ ಬಹುದೇವವಿಶ್ವಾಸಿಗಳು ಮತ್ತು ಈಸಾ(ಅ)

ಮಕ್ಕಾ ಪಟ್ಟಣದ ಬಹುದೇವವಿಶ್ವಾಸಿಗಳ ಕುರಿತು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ:

"ಮರ್ಯಮರ ಪುತ್ರ ಈಸಾರ ಉದಾಹರಣೆಯನ್ನೇ ಮುಂದಿಟ್ಟ ತಕ್ಷಣ ನಿಮ್ಮ ಜನಾಂಗದವರು ಆ ಕುರಿತು ಗುಲ್ಲೆಬ್ಬಿಸಿಬಿಟ್ಟರು ಮತ್ತು ನಮ್ಮ ಆರಾಧ್ಯರು ಉತ್ತಮರೋ ಅಥವಾ ಅವರೋ? ಎಂದು ಕೇಳತೊಡಗಿದರು. ಅವರು ಈ ಉದಾಹರಣೆಯನ್ನು ನಿಮ್ಮ ಮುಂದಿಟ್ಟಿರುವುದು ಜಗಳಕ್ಕಾಗಿ ಮಾತ್ರ. ವಾಸ್ತವದಲ್ಲಿ ಇವರು ಜಗಳಗಂಟರೇ ಆಗಿರುತ್ತಾರೆ. ಮರ್ಯಮರ ಪುತ್ರ ಓರ್ವ ದಾಸನೆಂಬುದರ ಹೊರತು ಇನ್ನೇನೂ ಆಗಿರಲಿಲ್ಲ. ನಾವು ಅವರಿಗೆ ಅನುಗ್ರಹ ಪ್ರದಾನ ಮಾಡಿದ್ದೆವು ಮತ್ತು ಅವರನ್ನು ಬನೀಇಸ್ರಾಈಲರ ಪಾಲಿಗೆ ನಮ್ಮ ಮಹಿಮೆಯ ದೃಷ್ಟಾಂತವಾಗಿ ಮಾಡಿಬಿಟ್ಟೆವು. ನಾವಿಚ್ಛಿಸಿದರೆ ಭೂಲೋಕದಲ್ಲಿ ನಿಮ್ಮ ಉತ್ತರಾಧಿಕಾರಿಗಳಾಗಲು ನಿಮ್ಮಿಂದಲೇ ದೇವಚರರನ್ನು ಸೃಷ್ಟಿಸಬಲ್ಲೆವು ಮತ್ತು ಅವರು(ಮರ್ಯಮರ ಪುತ್ರ) ವಾಸ್ತವದಲ್ಲಿ ಪುನರುತ್ಥಾನದ ಒಂದು ಕುರುಹಾಗಿದ್ದಾರೆ. ಆದುದರಿಂದ ನೀವು ಈ ವಿಷಯದಲ್ಲಿ ಸಂಶಯಪಡಬೇಡಿರಿ. ನನ್ನ ಮಾತನ್ನು ಒಪ್ಪಿಕೊಳ್ಳಿರಿ. ಇದು ನೇರವಾದ ಮಾರ್ಗ." (43:57-61)

ಇದಕ್ಕಿಂತ ಮೊದಲು ಇದೇ ಅಧ್ಯಾಯದ ಒಂದು ವಾಕ್ಯದಲ್ಲಿ ಹೀಗೆ ಹೇಳಲಾಗಿತ್ತು:

ನಾವು ನಿಮಗಿಂತ ಮುಂಚೆ ಕಳುಹಿಸಿದ್ದ ಎಲ್ಲ ಸಂದೇಶವಾಹಕರೊಡನೆ ಕೇಳಿ ನೋಡಿರಿ: ನಾವು ದಾಸ್ಯಕ್ಕಾಗಿ ರಹ್ಮಾನನ ಹೊರತು ಬೇರೆ ಕೆಲವು ಆರಾಧ್ಯರನ್ನೂ ನಿಶ್ಚಯಿಸಿದ್ದೇವೆಯೇ? (43:45)

ಈ ಉಪನ್ಯಾಸವನ್ನು ಮಕ್ಕಾದ ಜನರ ಮುಂದೆ ನೀಡುತ್ತಿದ್ದಾಗ ಅವರ ಪೈಕಿ ಅಬ್ದುಲ್ಲಾ ಬಿನ್ ಝಿಬಾರಾ ಎಂಬ ಓರ್ವ ವ್ಯಕ್ತಿ ಈ ರೀತಿ ಆಕ್ಷೇಪವೆತ್ತಿದ್ದನು: "ಕ್ರೈಸ್ತರು ಮರ್ಯಮರ ಪುತ್ರ ಈಸಾರನ್ನು(ಅ) ಅಲ್ಲಾಹನ ಪುತ್ರನೆಂದು ಸಾರಿ ಅವರ ಆರಾಧನೆ ಮಾಡುತ್ತಿಲ್ಲವೇ? ಹಾಗಿರುವಾಗ ನಮ್ಮ ಆರಾಧ್ಯರೇನು ಕಡಿಮೆ?" ಇದನ್ನು ಕೇಳಿ ಸತ್ಯನಿಷೇಧಿಗಳ ಆ ಸಭೆಯಲ್ಲಿ ಜನರು ಕೇಕೆ ಹಾಕಿ ನಕ್ಕರು. ಜೋರಾಗಿ ಘೋಷಣೆಗಳನ್ನು ಕೂಗ ತೊಡಗಿದರು. "ಈಗ ಬಿತ್ತು ಏಟು.", "ಈಗ ಸಿಕ್ಕಿಬಿದ್ದರು.", "ಈಗೇನುತ್ತರ ಕೊಡುತ್ತೀರಿ." ಆದರೆ ಅವರ ಈ ಅಸಂಬದ್ಧ ಮಾತುಗಳಿಂದ ಉಪನ್ಯಾಸವನ್ನು ಕೊನೆಗೊಳಿಸಲಿಲ್ಲ. ಬದಲಾಗಿ ಮೊದಲು ಯಾವ ವಿಷಯ ವನ್ನು ಪ್ರಸ್ತಾವಿಸಲಾಗಿತ್ತೋ ಅದನ್ನು ಪೂರ್ಣಗೊಳಿಸಲಾಯಿತು. ಅನಂತರ ಅವರ ಆಕ್ಷೇಪಕ್ಕೆ ಉತ್ತರ ನೀಡಲಾಯಿತು. ಆ ಉತ್ತರವೇ ಪ್ರಸ್ತುತ ವಾಕ್ಯಗಳಲ್ಲಿ ಬಂದಿದೆ.

ಈಸಾರನ್ನು(ಅ) ಇಲ್ಲಿ ಅಲ್ಲಾಹನ ಮಹಿಮೆಯ ದೃಷ್ಟಾಂತವೆನ್ನಲಾಗಿದೆ. ಈಸಾರನ್ನು(ಅ) ತಂದೆಯಿಲ್ಲದೆ ಸೃಷ್ಟಿಸಿರುವುದು, ಹಿಂದಿನ ಅಥವಾ ಮುಂದಿನ ಯಾವ ಪ್ರವಾದಿಗೂ ನೀಡಿರದಂತಹ ವಿಶಿಷ್ಟ ಪವಾಡಗಳನ್ನು ಅವರಿಗೆ ನೀಡಿರುವುದು ಅಲ್ಲಾಹನ ಮಹಿಮೆಯ ದೃಷ್ಟಾಂತವಾಗಿದೆ. ಈಸಾರವರು(ಅ) ಮಣ್ಣಿನಿಂದ ಹಕ್ಕಿಯ ಆಕಾರವನ್ನು ಮಾಡಿ ಅದಕ್ಕೆ ಊದಿದಾಗ ಅದು ಜೀವಂತ ಹಕ್ಕಿಯಾಗುತ್ತಿತ್ತು. ಅವರು ಹುಟ್ಟು ಕುರುಡರನ್ನು ಕಣ್ಣುಳ್ಳವರಾಗಿ ಮಾರ್ಪಡಿಸುತ್ತಿದ್ದರು. ಅವರು ಕುಷ್ಠರೋಗಿಗಳನ್ನು ಸಂಪೂರ್ಣ ಗುಣಪಡಿಸುತ್ತಿದ್ದರು.

ಮೃತರನ್ನು ಜೀವಂತಗೊಳಿಸುತ್ತಿದ್ದರು. ಆದರೆ ಈ ಎಲ್ಲ ಪವಾಡಗಳಿಂದಾಗಲೀ ಅಸಾಮಾನ್ಯ ಜನನದಿಂದಾಗಲೀ ಅವರು ದೇವನದಾಸನೆಂಬ ಪದವಿಯಿಂದ ಮುಂದುವರಿದು ದೇವರಾಗಿ ಬಿಡುವುದಿಲ್ಲ. ಅವರನ್ನು ದೇವಪುತ್ರನೆಂದು ಬಗೆದು ಪೂಜಿಸುವುದು ತಪ್ಪು. ಅವರ ನೈಜ ಸ್ಥಾನಮಾನವು ಅಲ್ಲಾಹನ ಓರ್ವ ವಿಶಿಷ್ಟ ದಾಸನಿಗಿಂತ ಮಿಗಿಲಾದುದಲ್ಲ. ಅಲ್ಲಾಹನು ತನ್ನ ಅನುಗ್ರಹಗಳನ್ನು ದಯಪಾಲಿಸಿ ಅವರನ್ನು ತನ್ನ ಸಾಮರ್ಥ್ಯದ ನಿದರ್ಶನವಾಗಿ ಮಾಡಿದನು.

ಇಲ್ಲಿ ಈಸಾರನ್ನು(ಅ) ಪುನರುತ್ಥಾನದ ಕುರುಹು ಎಂದೂ ಹೇಳಲಾಗಿದೆ. ಈಸಾ(ಅ) ಅವರು ಪುನರುತ್ಥಾನದ ಜ್ಞಾನದ ಒಂದು ಮೂಲವಾಗಿದ್ದಾರೆ. ಅವರ ಮೂಲಕ ಅಲ್ಲಾಹನು ಜಗತ್ತಿಗೆ ಪುನರುತ್ಥಾನದ ಕುರುಹುಗಳ ಪೈಕಿ ಕೆಲವನ್ನು ದಯಪಾಲಿಸಿದ್ದನು. ಅವರು ಅಲ್ಲಾಹನ ದಾಸ ಮತ್ತು ಪ್ರವಾದಿಯಾಗಿದ್ದು ಮಣ್ಣಿನಿಂದ ಹಕ್ಕಿಯನ್ನು ಸೃಷ್ಟಿಸುತ್ತಿದ್ದರು. ಮರಣ ಹೊಂದಿದವರನ್ನು ಪುನಃ ಜೀವಂತಗೊಳಿಸುತ್ತಿದ್ದರು. ಇವು ಪುನರುತ್ಥಾನ ಸಂಭವಿಸುವುದರ ಒಂದು ಸ್ಪಷ್ಟ ನಿದರ್ಶನವಾಗಿದೆ. ಅಲ್ಲಾಹನು, ತಂದೆಯಿಲ್ಲದೆ ಮಗುವನ್ನು ಸೃಷ್ಟಿಸಬಲ್ಲ ನೆಂದಾದರೆ, ಅಲ್ಲಾಹನ ಓರ್ವ ದಾಸ ಮಣ್ಣಿನ ಮೂರ್ತಿಯಲ್ಲಿ ಜೀವ ತುಂಬಬಲ್ಲನೆಂದಾದರೆ, ಮೃತರನ್ನು ಜೀವಂತಗೊಳಿಸಬಲ್ಲನೆಂದಾದರೆ ಅಲ್ಲಾಹನು ನಿಮ್ಮನ್ನೂ ಎಲ್ಲ ಮನುಷ್ಯರನ್ನೂ ಮರಣದ ಬಳಿಕ ಪುನಃ ಜೀವಂತಗೊಳಿಸುವನು ಎಂಬುದನ್ನು ಹೇಗೆ ತಾನೆ ನಿರಾಕರಿಸಲು ಸಾಧ್ಯ?

## ಸನ್ಯಾಸ

ಇಂದು ಕ್ರೈಸ್ತರಲ್ಲಿ ವ್ಯಾಪಕವಾಗಿರುವ ಸನ್ಯಾಸದ ಪದ್ಧತಿಯ ಕುರಿತು ಕೂಡಾ ಕುರ್‌ಆನಿನ ನಿಲುವನ್ನು ತಿಳಿದುಕೊಳ್ಳುವುದು ಇಲ್ಲಿ ಸಂದರ್ಭೋಚಿತವೆನಿಸುತ್ತದೆ.

**"ಅವರ ಬಳಿಕ ನಾವು ಒಬ್ಬರ ನಂತರ ಒಬ್ಬರಂತೆ ಸಂದೇಶವಾಹಕರನ್ನು ಕಳುಹಿಸಿದೆವು ಮತ್ತು ಅವರೆಲ್ಲರ ಬಳಿಕ ಮರ್ಯಮರ ಪುತ್ರ ಈಸಾರನ್ನು ಕಳುಹಿಸಿದೆವು. ಅವರಿಗೆ ಇಂಜೀಲನ್ನು ದಯಪಾಲಿಸಿದೆವು. ಅವರ ಅನುಯಾಯಿಗಳ ಹೃದಯಗಳಲ್ಲಿ ನಾವು ಅನುಕಂಪ ಮತ್ತು ಕರುಣೆಯನ್ನಿಟ್ಟೆವು ಮತ್ತು ಸನ್ಯಾಸವನ್ನು ಅವರು ತಾವೇ ಆವಿಷ್ಕರಿಸಿಕೊಂಡರು. ನಾವು ಅದನ್ನು ಅವರ ಮೇಲೆ ಕಡ್ಡಾಯಗೊಳಿಸಿರಲಿಲ್ಲ. ಆದರೆ ಅಲ್ಲಾಹನ ಸಂಪ್ರೀತಿಯ ಅಭಿಲಾಷೆಯಿಂದ ಸ್ವತಃ ಅವರೇ ಈ ನವೀನಾಚಾರವನ್ನು ಆರಂಭಿಸಿಕೊಂಡರು. ಆದರೆ ಅವರು ಅದನ್ನು ಪಾಲಿಸಬೇಕಾದ ರೀತಿಯಲ್ಲಿ ಪಾಲಿಸಲಿಲ್ಲ. ಅವರ ಪೈಕಿ ಸತ್ಯವನ್ನು ಸ್ವೀಕರಿಸಿದವರಿಗೆ ನಾವು ಅವರ ಸತ್ಫಲವನ್ನು ದಯಪಾಲಿಸಿದೆವು. ಆದರೆ ಅವರಲ್ಲಿ ಹೆಚ್ಚಿನವರು ಕರ್ಮಭ್ರಷ್ಟರಾಗಿರುತ್ತಾರೆ." (57:27)**

ಸನ್ಯಾಸವೆಂಬುದು ಕ್ರೈಸ್ತ ಧರ್ಮಾವಲಂಬಿಗಳು ತಮ್ಮ ಮೇಲೆ ತಾವೇ ಕಡ್ಡಾಯಗೊಳಿಸಿಕೊಂಡಂತಹ ಒಂದು ನವೀನಾಚಾರವಾಗಿತ್ತು. ಅದನ್ನು ಅಲ್ಲಾಹನು ಅವರ ಮೇಲೆ ಕಡ್ಡಾಯಗೊಳಿಸಿರಲಿಲ್ಲ ಎಂದು ಈ ವಚನದಿಂದ ತಿಳಿದುಬರುತ್ತದೆ. ಒಬ್ಬ ವ್ಯಕ್ತಿಯು ಅಲ್ಲಾಹನ ಭಯದ ಹೆಸರಲ್ಲಿ ಲೋಕತ್ಯಾಗ ಮಾಡಿ ವೈರಾಗಿಯಾಗುವುದು, ಲೌಕಿಕ

ಜೀವನದ ಸುಖಗಳಿಂದ ದೂರವಾಗಿ ಕಾಡು-ಮೇಡುಗಳಲ್ಲಿ ಆಶ್ರಯ ಪಡೆಯುವುದು ಮತ್ತು ಏಕಾಂತ ವಾಸವನ್ನು ಅನುಸರಿಸುವುದನ್ನು ಸನ್ಯಾಸವೆನ್ನಲಾಗುತ್ತದೆ.

ಅಲ್ಲಾಹನು ಪ್ರವಾದಿ ಈಸಾ(ಅ) ಅವರ ಮೇಲೆ ಕಡ್ಡಾಯಗೊಳಿಸಿದುದು ಅಲ್ಲಾಹನ ಸಂಪ್ರೀತಿಯನ್ನು ಗಳಿಸಲು ಅವರು ಪ್ರಯತ್ನಿಸಬೇಕೆಂಬುದೇ ಆಗಿತ್ತು. 'ಸನ್ಯಾಸ'ವು ಅಲ್ಲಾಹನು ಕಡ್ಡಾಯಗೊಳಿಸಿದ ಒಂದು ಧಾರ್ಮಿಕ ವಿಧಿಯಾಗಿರಲಿಲ್ಲ. ಅದನ್ನು ಕ್ರೈಸ್ತರು ಅಲ್ಲಾಹನ ಸಂಪ್ರೀತಿಗಳಿಸುವ ಮಾರ್ಗವೆಂದು ಬಗೆದು ತಾವಾಗಿಯೇ ತಮ್ಮ ಧರ್ಮದಲ್ಲಿ ಅಳವಡಿಸಿ ಕೊಂಡರು. 'ಸನ್ಯಾಸ'ವು ಒಂದು ಅನೈಸರ್ಗಿಕ ಕ್ರಿಯೆಯಾಗಿದ್ದು ಯಾವ ಕಾಲದಲ್ಲಿಯೂ ಇದು ಸತ್ಯಧರ್ಮದ ಒಂದು ವಿಧಿಯಾಗಿರಲಿಲ್ಲ.

ಪ್ರವಾದಿ ಮುಹಮ್ಮದ್(ಸ) ಅವರು ತಮ್ಮ ಒಂದು ವಚನದಲ್ಲಿ ಈ ರೀತಿ ಹೇಳಿರುವರು:

"ಇಸ್ಲಾಮಿನಲ್ಲಿ ಸನ್ಯಾಸವಿಲ್ಲ." (ಮುಸ್ನದ್ ಅಹ್ಮದ್)

ಇನ್ನೊಂದು ಪ್ರವಾದಿ ವಚನದಲ್ಲಿ ಹೀಗಿದೆ:

"ಈ ಸಮುದಾಯದ ಸನ್ಯಾಸವು ಅಲ್ಲಾಹನ ಮಾರ್ಗದ ಹೋರಾಟವಾಗಿದೆ."

(ಮುಸ್ನದ್ ಅಹ್ಮದ್, ಮುಸ್ನದ್ ಅಬೂಯಅ್‌ಲಾ)

ಅರ್ಥಾತ್ ಈ ಸಮುದಾಯಕ್ಕೆ ಆಧ್ಯಾತ್ಮಿಕ ಪ್ರಗತಿಯ ಮಾರ್ಗವು, ವೈರಾಗ್ಯ ಮತ್ತು ಸನ್ಯಾಸವಾಗಿರದೆ ಅಲ್ಲಾಹನ ಮಾರ್ಗದ ಹೋರಾಟವಾಗಿದೆ. ಈ ಸಮುದಾಯವು ಲೌಕಿಕ ಸತ್ವ ಪರೀಕ್ಷೆಗಳ ಭಯದಿಂದಾಗಿ ಕಾಡು-ಮೇಡುಗಳಲ್ಲಿ ಹೋಗಿ ಆಶ್ರಯ ಪಡೆಯುವ ಬದಲಾಗಿ ದೇವಮಾರ್ಗದಲ್ಲಿ ಹೋರಾಟ ಮಾಡಿ ಅವುಗಳನ್ನು ದಿಟ್ಟತನದಿಂದ ಎದುರಿಸುತ್ತದೆ.

"ಪ್ರವಾದಿ ಮುಹಮ್ಮದ್(ಸ) ಅವರ ಅನುಯಾಯಿಗಳ ಪೈಕಿ ಒಬ್ಬರು ನಾನು ಯಾವಾಗಲೂ ರಾತ್ರಿಯಿಡೀ ನಮಾಝ್ ಮಾಡುವೆನು ಎಂದರು. ಇನ್ನೊಬ್ಬರು ನಾನು ಯಾವಾಗಲೂ ಹಗಲಿಡೀ ಉಪವಾಸ ಆಚರಿಸುವೆನು ಎಂದರು. ಮತ್ತೊಬ್ಬರು ನಾನು ಎಂದೂ ಮದುವೆಯಾಗಲಾರೆನು ಮತ್ತು ಸ್ತ್ರೀಯರೊಂದಿಗೆ ಸಂಪರ್ಕ ಇಟ್ಟುಕೊಳ್ಳಲಾರೆನು ಎಂದರು. ಈ ವಿಷಯಗಳನ್ನು ತಿಳಿದ ಪ್ರವಾದಿ ಮುಹಮ್ಮದ್(ಸ) ಅವರು ಹೇಳಿದರು- ಅಲ್ಲಾಹನಾಣೆ! ನಾನು ನಿಮಗಿಂತ ಹೆಚ್ಚು ಅಲ್ಲಾಹನನ್ನು ಭಯಪಡುತ್ತೇನೆ. ಆದರೆ ನನ್ನ ಕ್ರಮ ಹೇಗೆಂದರೆ- ನಾನು ಉಪವಾಸ ಆಚರಿಸುತ್ತೇನೆ ಮತ್ತು ಆಚರಿಸದೆಯೂ ಇರುತ್ತೇನೆ. ರಾತ್ರಿಯ ವೇಳೆ ನಮಾಝ್ ಮಾಡುತ್ತೇನೆ ಮತ್ತು ನಿದ್ರೆಯನ್ನೂ ಮಾಡುತ್ತೇನೆ. ಸ್ತ್ರೀಯ ರೊಂದಿಗೆ ವಿವಾಹವನ್ನೂ ಮಾಡುತ್ತೇನೆ. ಯಾರಿಗೆ ನನ್ನ ಕ್ರಮವು ಇಷ್ಟವಿಲ್ಲವೋ ಅವನೊಂದಿಗೆ ನನಗೆ ಯಾವ ಸಂಬಂಧವೂ ಇಲ್ಲ."

ಪ್ರವಾದಿ ಮುಹಮ್ಮದ್(ಸ) ಅವರು ಇನ್ನೊಂದು ಸಂದರ್ಭದಲ್ಲಿ ಹೀಗೆ ಹೇಳಿದ್ದರು:

"ನಿಮ್ಮ ಮೇಲೆ ನೀವೇ ಕಾಠಿಣ್ಯ ತೋರದಿರಿ. ಅನ್ಯಥಾ ಅಲ್ಲಾಹನೂ ನಿಮ್ಮ ಮೇಲೆ ಕಾಠಿಣ್ಯ ತೋರುವನು. ಒಂದು ವರ್ಗವು ಇದೇ ಕಾಠಿಣ್ಯವನ್ನು ಅನುಸರಿಸಿದಾಗ ಅಲ್ಲಾಹನೂ

ಅವರನ್ನು ಕಠಿಣವಾಗಿ ಹಿಡಿದನು. ನೋಡಿರಿ: ಅವರು ತಮ್ಮ ಅಳಿದುಳಿದ ಮಠಗಳಲ್ಲಿಯೂ ಆರಾಧನಾಲಯಗಳಲ್ಲಿಯೂ ಇದ್ದಾರೆ." (ವರದಿ: ಅನಸ್(ರ)- ಅಬೂದಾವೂದ್)

ಸನ್ಯಾಸವನ್ನು ತಮ್ಮ ಮೇಲೆ ಕಡ್ಡಾಯಗೊಳಿಸಿಕೊಳ್ಳುವ ಮೂಲಕ ಕ್ರೈಸ್ತರು ಎರಡು ರೀತಿಯ ತಪ್ಪೆಸಗಿದರು. ಮೊದಲನೆಯದಾಗಿ ಅಲ್ಲಾಹನು ಆದೇಶಿಸಿರದಂತಹ ನಿರ್ಬಂಧಗಳನ್ನು ಅವರು ತಮ್ಮ ಮೇಲೆ ತಾವೇ ಹೇರಿಕೊಂಡರು. ಎರಡನೆಯದಾಗಿ ತಾವು ಅಲ್ಲಾಹನ ಸಂಪ್ರೀತಿ ಗಳಿಸುವುದಕ್ಕಾಗಿ ತಮ್ಮ ಮೇಲೆ ಹೇರಿಕೊಂಡಿದ್ದಂತಹ ಈ ನಿರ್ಬಂಧಗಳನ್ನು ಪಾಲಿಸಲು ಅಸಮರ್ಥರಾದರು. ತನ್ಮೂಲಕ ಅಲ್ಲಾಹನ ಸಂಪ್ರೀತಿಯನ್ನು ಗಳಿಸುವ ಬದಲು ಅವನ ಕ್ರೋಧಕ್ಕೆ ಪಾತ್ರರಾದರು.

## ಕ್ರೈಸ್ತ ಸನ್ಯಾಸದ ಇತಿಹಾಸ

ಈ ವಿಷಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲಿಕ್ಕೆ ಕ್ರೈಸ್ತ ಸನ್ಯಾಸದ ಇತಿಹಾಸದ ಮೇಲೆ ಒಂದು ದೃಷ್ಟಿ ಹಾಯಿಸುವುದು ಅಗತ್ಯವೆನಿಸುತ್ತದೆ:

ಹ.ಈಸಾ(ಅ) ಅವರ ನಂತರ ಸುಮಾರು ಇನ್ನೂರು ವರ್ಷಗಳ ತನಕ ಕ್ರೈಸ್ತ ಚರ್ಚ್‌ನಲ್ಲಿ ಸನ್ಯಾಸದ ಪದ್ಧತಿಯಿರಲಿಲ್ಲ. ಆದರೆ ಆರಂಭದಿಂದಲೇ ಕ್ರೈಸ್ತ ಧರ್ಮದಲ್ಲಿ ಸನ್ಯಾಸದ ಕಡೆಗೆ ಒಲವು ಇತ್ತು. ಸನ್ಯಾಸಕ್ಕೆ ಪ್ರೇರಣೆ ನೀಡಬಲ್ಲಂತಹ ವಿಚಾರಗಳು ಅವರಲ್ಲಿ ಇದ್ದುವು. ಲೋಕ ತ್ಯಾಗ ಮತ್ತು ವೈವಾಹಿಕ ಬಂಧನದಿಂದ ಮುಕ್ತವಾಗಿರು ವುದನ್ನು ನೈತಿಕತೆಯ ಮಾದರಿ ಎಂದು ಬಗೆಯುವುದು ಸನ್ಯಾಸದ ತಳಹದಿಯಾಗಿದೆ. ಈ ಎರಡು ಪ್ರವೃತ್ತಿಗಳೂ ಕ್ರೈಸ್ತ ಧರ್ಮದ ಆರಂಭದಲ್ಲೇ ಇದ್ದುವು. ವಿವಾಹವಾಗದಿರುವುದು ಪಾವಿತ್ರ್ಯಕ್ಕೆ ಸಮಾನವೆಂದು ಭಾವಿಸುವುದರಿಂದಾಗಿ ಕ್ರೈಸ್ತ ಚರ್ಚ್‌ಗಳಲ್ಲಿ ಧಾರ್ಮಿಕ ಸೇವೆ ಸಲ್ಲಿಸುತ್ತಿರುವವರು ಮದುವೆಯಾಗುವುದು, ಮಕ್ಕಳನ್ನು ಹೊಂದುವುದು ಮತ್ತು ಸಂಸಾರದ ಜಂಜಡಗಳಲ್ಲಿ ಸಿಲುಕುವುದನ್ನು ಅರೋಚಕವೆಂದು ಪರಿಗಣಿಸಲಾಗುತ್ತಿತ್ತು. ಇದು ಕ್ರಿ.ಶ. ಮೂರನೆಯ ಶತಮಾನದ ಆರಂಭದ ಕಾಲದಲ್ಲಿ ಒಂದು ಸೋಂಕಿನ ರೂಪ ತಾಳಿತು. ಸನ್ಯಾಸವು ಕ್ರೈಸ್ತ ಧರ್ಮದಲ್ಲಿ ವ್ಯಾಪಕವಾಯಿತು. ಇದಕ್ಕೆ ಮೂರು ಐತಿಹಾಸಿಕ ಕಾರಣಗಳಿದ್ದುವು:

1) ಬಹುದೇವಾರಾಧಕ ಸಮಾಜದಲ್ಲಿ ಲೈಂಗಿಕತೆ, ಅನೈತಿಕತೆ ಮತ್ತು ಲೌಕಿಕತೆಯು ಒಂದು ವ್ಯಾಧಿಯ ರೂಪದಲ್ಲಿ ಹರಡಿತ್ತು. ಇದನ್ನು ತಡೆಯುವಲ್ಲಿ ಸಂತುಲಿತ ಹಾದಿ ತುಳಿಯುವ ಬದಲು ಕ್ರೈಸ್ತ ವಿದ್ವಾಂಸರು ಅತಿರೇಕದ ಹಾದಿಯನ್ನು ತುಳಿದರು. ಅವರು ಶೀಲಕ್ಕೆ ಎಷ್ಟು ಒತ್ತು ನೀಡಿದರೆಂದರೆ ಸ್ತ್ರೀ-ಪುರುಷ ಸಂಬಂಧವು ಅದು ವೈವಾಹಿಕ ವಾಗಿದ್ದರೂ ಸರಿ, ಮಲಿನವೆಂದು ಪರಿಗಣಿಸಲ್ಪಟ್ಟಿತು. ಅವರು ಲೌಕಿಕತೆಯ ವಿರುದ್ಧ ಎಷ್ಟು ಉಗ್ರ ಪ್ರಹಾರ ಮಾಡಿದರೆಂದರೆ ಸೊತ್ತು-ವಿತ್ತಗಳನ್ನು ಹೊಂದುವುದೇ ಓರ್ವ ಧಾರ್ಮಿಕ ವ್ಯಕ್ತಿಯ ಮಟ್ಟಿಗೆ ಅಪರಾಧವಾಯಿತು. ವ್ಯಕ್ತಿಯು ತೀರಾ ಬಡವ ಮತ್ತು ವೈರಾಗಿಯಾಗಿ ರುವುದೇ ನೈತಿಕತೆಯ ಮಾನದಂಡವಾಗಿ ಮಾರ್ಪಡುವಷ್ಟರ ಮಟ್ಟಿಗೆ ಅವರು ನೈತಿಕತೆಯ

ಪ್ರಚಾರ ಮಾಡಿದರು. ಈ ರೀತಿ ಮೂರ್ತಿ ಪೂಜಕರ ಸುಖಲೋಲುಪತೆಗೆದುರಾಗಿ ಅವರು ಮತ್ತೊಂದು ಅತಿರೇಕವನ್ನು ಎಸಗಿದರು. ಎಲ್ಲ ಆಶೆಗಳನ್ನು ಅದುಮಿಡುವುದು, ಆತ್ಮವನ್ನು ನಿಗ್ರಹಿಸುವುದು ಮತ್ತು ಎಲ್ಲ ರೀತಿಯ ಸುಖಗಳಿಂದ ವಂಚಿತರಾಗಿರುವುದು ನೈತಿಕತೆಯ ಗುರಿಯಾಯಿತು. ಶರೀರವನ್ನು ವಿಧವಿಧವಾಗಿ ದಂಡಿಸುವುದನ್ನು ಆಧ್ಯಾತ್ಮಿಕತೆಯ ಸಾಧನೆ ಮತ್ತು ಅದರ ಪುರಾವೆಯೆಂದು ಭಾವಿಸಲಾಯಿತು.

2) ಕ್ರೈಸ್ತ ಧರ್ಮವು ಯಶಸ್ವಿಯಾಗಿ ಸಾರ್ವಜನಿಕರಲ್ಲಿ ಪ್ರಚಾರಗೊಳ್ಳಲು ಆರಂಭವಾದಾಗ ಹೆಚ್ಚೆಚ್ಚು ಜನರನ್ನು ಚರ್ಚ್‌ಗೆ ಆಕರ್ಷಿಸಲಿಕ್ಕಾಗಿ ಸಾರ್ವಜನಿಕರಲ್ಲಿ ಜನಪ್ರಿಯವಾದ ಎಲ್ಲ ಕೆಡುಕುಗಳನ್ನು ಚರ್ಚ್‌ನ ವ್ಯಾಪ್ತಿಗೆ ತರಲಾಯಿತು. ಹಳೆಯ ಆರಾಧ್ಯರುಗಳ ಸ್ಥಾನದಲ್ಲಿ ಸಂತರ ಆರಾಧನೆಯು ವ್ಯಾಪಕವಾಯಿತು. ಹೋರಸ್ (Horus) ಮತ್ತು ಐಸಿಸ್‌ನ(Isis) ಮೂರ್ತಿಗಳ ಸ್ಥಾನದಲ್ಲಿ ಏಸುಕ್ರಿಸ್ತ ಮತ್ತು ಮರ್ಯಮ್‌ರ ಮೂರ್ತಿಗಳು ಪೂಜಿಸಲ್ಪಡ ತೊಡಗಿದುವು. ಸ್ಯಾಟರ್‌ನೇಲಿಯಾದ (Saturnalia) ಸ್ಥಾನದಲ್ಲಿ ಕ್ರಿಸ್‌ಮಸ್ ಹಬ್ಬವನ್ನು ಆಚರಿಸಲಾಯಿತು. ಹಳೆಯ ಕಾಲದ ತಾಯಿತ, ಮಂತ್ರ, ಶಕುನ, ಕಣಿ, ಭೂತ ಪ್ರೇತಗಳನ್ನು ಓಡಿಸುವುದು ಇತ್ಯಾದಿಗಳನ್ನೆಲ್ಲಾ ಕ್ರೈಸ್ತ ಸನ್ಯಾಸಿಗಳೂ ಆರಂಭಿಸಿದರು. ಜನರು ಸಾಮಾನ್ಯವಾಗಿ ಕೊಳಕಾಗಿ ಮತ್ತು ನಗ್ನವಾಗಿ ಗುಹೆ ಮತ್ತು ಬೆಟ್ಟಗಳಲ್ಲಿ ವಾಸವಾಗಿರುವವರನ್ನು ಆಧ್ಯಾತ್ಮಿಕ ಸಿದ್ಧಿ ಗಳಿಸಿದವರೆಂದು ಭಾವಿಸುತ್ತಿದ್ದರು. ಆದ್ದರಿಂದ ಕ್ರೈಸ್ತ ಚರ್ಚ್‌ನಲ್ಲಿ ಕೂಡಾ ಸಂತ ಪದವಿಯ ಇದೇ ಕಲ್ಪನೆ ಜನಪ್ರಿಯವಾಯಿತು. ಇಂತಹ ಜನರ ಪವಾಡಗಳ ವರ್ಣನೆಯಿಂದ ಕ್ರೈಸ್ತ ಸಂತರ ಜೀವನ ಚರಿತ್ರೆಯ ಗ್ರಂಥಗಳು ತುಂಬಿಕೊಂಡಿವೆ.

3) ಧರ್ಮದ ಮೇರೆಗಳನ್ನು ಖಚಿತವಾಗಿ ನಿರ್ಣಯಿಸುವ ಸಮಗ್ರ ಧರ್ಮಶಾಸ್ತ್ರವಾಗಲಿ ಸ್ಪಷ್ಟ ಪ್ರವಾದಿಚರ್ಯೆಯಾಗಲೀ ಕ್ರೈಸ್ತರ ಬಳಿ ಇರಲಿಲ್ಲ. ಮೂಸಾ(ಅ) ಅವರ ಧರ್ಮಶಾಸ್ತ್ರವನ್ನು ಅವರು ತೊರೆದಿದ್ದರು. ಕೇವಲ ಇಂಜೀಲ್‌ನಲ್ಲಾದರೋ ಅಂತಹ ಸಮಗ್ರ ಮಾರ್ಗದರ್ಶನವಿರಲಿಲ್ಲ. ಆದ್ದರಿಂದ ಕ್ರೈಸ್ತ ವಿದ್ವಾಂಸರು ಇತರ ತತ್ವಜ್ಞಾನ ಮತ್ತು ಸಂಪ್ರದಾಯಗಳಿಂದ ಪ್ರಭಾವಿತರಾಗಿ ಹಾಗೂ ತಮ್ಮ ಸ್ವಂತ ಒಲವುಗಳಿಗೆ ಅನುಸಾರವಾಗಿ ಅನೇಕ ಬಗೆಯ ನವೀನಾಚಾರಗಳನ್ನು ತಮ್ಮ ಧರ್ಮದಲ್ಲಿ ಸೇರಿಸುತ್ತಾ ಹೋದರು. ಸನ್ಯಾಸವೂ ಇದೇ ರೀತಿಯ ಒಂದು ನವೀನಾಚಾರವಾಗಿತ್ತು. ಕ್ರೈಸ್ತ ಧರ್ಮದ ವಿದ್ವಾಂಸರು ಅದನ್ನು ಬೌದ್ಧ ಭಿಕ್ಷುಗಳಿಂದ, ಹಿಂದೂ ಸನ್ಯಾಸಿಗಳಿಂದ, ಪ್ರಾಚೀನ ಈಜಿಪ್ಟಿನ ವೈರಾಗಿಗಳಿಂದ (Anchorites) ಇರಾನಿನ ಮಾನ್ವಿಗಳಿಂದ ಹಾಗೂ ಪ್ಲಾಟೋ ಮತ್ತು ಪ್ಯಾಟಿನೋಸ್‌ನ ಅನುಯಾಯಿಗಳಿಂದ ಕಲಿತರು. ಅದನ್ನೇ ಅವರು ಆತ್ಮಸಂಸ್ಕರಣೆಯ ವಿಧಾನ, ಆಧ್ಯಾತ್ಮಿಕ ಪ್ರಗತಿಯ ಮಾಧ್ಯಮ ಮತ್ತು ದೇವ ಸಾಮೀಪ್ಯದ ಹೇತುವೆಂದು ಸಾರಿದರು. ಈ ತಪ್ಪನ್ನು ಎಸಗಿದವರು ಸಾಮಾನ್ಯ ಮನುಷ್ಯರಾಗಿರಲಿಲ್ಲ. ಕ್ರಿ.ಶ. ಮೂರರಿಂದ ಏಳನೆಯ ಶತಮಾನದ ತನಕ (ಅಂದರೆ ಮುಹಮ್ಮದ್(ಸ) ಅವರ ಪ್ರವಾದಿತ್ವದ ಕಾಲದ ತನಕ) ಆಗಿ ಹೋದ ಕ್ರೈಸ್ತ ಜಗತ್ತಿನ ಅತಿರಥ ಮಹಾರಥರಾದ ಸಂತ ಅಥಾನಾ ಸೇವಿಸ್, ಸಂತ ಬಾಸಿಲ್,

ಸಂತ ಗ್ರೆಗೋರಿ ನಾಝಿಯ ನಿಝೀನ್, ಸಂತ ಕ್ರೈಸ್ಟೋಸ್ಟಮ್, ಸಂತ ಎಂಬ್ರೂಸ್, ಸಂತಜೆರೋಮ್, ಸಂತ ಆಗಸ್ಟಿನ್, ಸಂತ ಬೆನೆಡಿಕ್ಟ್, ಗ್ರೆಗೋರಿ ದ ಗ್ರೇಟ್ ಮುಂತಾದವರೆಲ್ಲರೂ ಸನ್ಯಾಸಿಗಳಾಗಿದ್ದು ಸನ್ಯಾಸ ಪದ್ಧತಿಯ ಪ್ರಬಲ ಪ್ರತಿಪಾದಕರಾಗಿದ್ದರು.. ಇವರ ಪ್ರಯತ್ನಗಳಿಂದಲೇ ಚರ್ಚ್‌ನಲ್ಲಿ ಸನ್ಯಾಸವು ರೂಢಿಗೆ ಬಂತು.

ಕ್ರೈಸ್ತರಲ್ಲಿ ಸನ್ಯಾಸವು ಈಜಿಪ್ಟ್‌ನಲ್ಲಿ ಆರಂಭಗೊಂಡಿತೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಅದನ್ನು ಬಳಕೆಗೆ ತಂದವರು ಸಂತ ಅಂತೋನಿ (St. Antony) ಆಗಿದ್ದರು. ಅವರು ಕ್ರಿ.ಶ. 250ರಲ್ಲಿ ಜನಿಸಿ 350ರಲ್ಲಿ ನಿಧನಹೊಂದಿದರು. ಅವರನ್ನು ಕ್ರೈಸ್ತರ ಪ್ರಥಮ ಸನ್ಯಾಸಿ ಎನ್ನುತ್ತಾರೆ. ಅವರು ಫಯ್ಯೂಮ್ ಎಂಬ ಪ್ರದೇಶದ ಪಸ್ಪೀರ್ ಎಂಬ ಊರಲ್ಲಿ (ಈಗ ಅದರ ಹೆಸರು ದೈರಲ್ ಮೈಮೂನ್ ಎಂದಾಗಿದೆ) ಪ್ರಥಮ ಮಠವನ್ನು ಸ್ಥಾಪಿಸಿದರು. ಅನಂತರ ಅವರು ದ್ವಿತೀಯ ಮಠವನ್ನು ಕೆಂಪು ಸಮುದ್ರದ ದಡದಲ್ಲಿ ಸ್ಥಾಪಿಸಿದರು. ಈಗ ಅದನ್ನು ದೈರ್‌ಮಾರ್ ಅಂತೋನಿಯೂಸ್ ಎನ್ನುತ್ತಾರೆ. ಕ್ರೈಸ್ತರಲ್ಲಿರುವ ಸನ್ಯಾಸದ ನಿಯಮ ನಿಬಂಧನೆಗಳು ಅವರ ಲೇಖನ ಮತ್ತು ಬೋಧನೆಗಳಿಂದ ಪಡೆದು ದಾಗಿದೆ. ಈ ರೀತಿ ಆರಂಭಗೊಂಡ ಸನ್ಯಾಸವು ಈಜಿಪ್ಟ್‌ನಲ್ಲಿ ಪ್ರವಾಹದಂತೆ ವ್ಯಾಪಿಸಿತು. ಅಲ್ಲಲ್ಲಿ ಸನ್ಯಾಸಿಗಳ ಮತ್ತು ಸನ್ಯಾಸಿನಿಯರ ಮಠಗಳು ಸ್ಥಾಪನೆಗೊಂಡುವು. ಅವುಗಳಲ್ಲಿ ಕೆಲವು ಮಠಗಳಲ್ಲಂತೂ ಏಕಕಾಲಕ್ಕೆ ಮೂರು ಸಾವಿರದಷ್ಟು ಸನ್ಯಾಸಿಗಳು ವಾಸಿಸುತ್ತಿದ್ದರು. ಕ್ರಿ.ಶ. 335ರಲ್ಲಿ ಈಜಿಪ್ಟ್‌ನಲ್ಲಿ ಇನ್ನೊಬ್ಬ ಕ್ರೈಸ್ತ ಸಂತ ಪಾಕೂಮಿಯೂಸ್ ಎಂಬ ಹೆಸರಲ್ಲಿ ಪ್ರಸಿದ್ಧರಾದರು. ಅವರು ಸನ್ಯಾಸಿಗಳು ಮತ್ತು ಸನ್ಯಾಸಿನಿಯರಿಗಾಗಿ ಹತ್ತು ದೊಡ್ಡ ಮಠಗಳನ್ನು ಸ್ಥಾಪಿಸಿದರು. ತರುವಾಯ ಸಿರಿಯಾ, ಫೆಲೆಸ್ತೀನ್, ಆಫ್ರಿಕಾ ಮತ್ತು ಯೂರೋಪ್‌ನ ವಿಭಿನ್ನ ರಾಷ್ಟ್ರಗಳಲ್ಲಿ ಸನ್ಯಾಸಿಗಳ ಮಠಗಳು ಸ್ಥಾಪನೆಗೊಂಡುವು. ಮೊದಮೊದಲು ಈ ಮಠಗಳ ಮತ್ತು ಸನ್ಯಾಸದ ಬಗ್ಗೆ ಕ್ರೈಸ್ತ ಚರ್ಚ್‌ನಲ್ಲಿ ಸಾಕಷ್ಟು ಗೊಂದಲವಿತ್ತು. ಏಕೆಂದರೆ ಚರ್ಚ್‌ನ ಪ್ರಕಾರ ವೈರಾಗ್ಯ, ಏಕಾಂತ ಜೀವನ, ಬಡತನ ಇತ್ಯಾದಿಗಳನ್ನು ಆಧ್ಯಾತ್ಮಿಕ ಜೀವನದ ಆದರ್ಶವೆಂದು ಪರಿಗಣಿಸಬಹುದಾದರೂ ಸನ್ಯಾಸಿಗಳಂತೆ ವಿವಾಹ ಮತ್ತು ಸಂಪತ್ತು ಇತ್ಯಾದಿಗಳನ್ನು ಪಾಪ ಕಾರ್ಯವೆನ್ನುವಂತಿರಲಿಲ್ಲ. ಕೊನೆಗೆ ಸಂತ ಅಥಾನಾಸಿಯೂಸ್ (ನಿಧನ: 373), ಸಂತ ಬಾಸಿಲ್ (ನಿಧನ: 379), ಸಂತ ಆಗಸ್ಟಾಯಿನ್ (ನಿಧನ: 430) ಮತ್ತು ಗ್ರೆಗೋರಿ ದ ಗ್ರೇಟ್ (ನಿಧನ 609) ಮುಂತಾದವರ ಪ್ರಭಾವದಿಂದ ಸನ್ಯಾಸದ ಅನೇಕ ನಿಬಂಧನೆಗಳು ಚರ್ಚ್‌ನ ವ್ಯವಸ್ಥೆಯಲ್ಲೂ ಶಾಮೀಲಾದುವು.

## ಕ್ರೈಸ್ತ ಸನ್ಯಾಸದ ವೈಶಿಷ್ಟ್ಯಗಳು

ಈ ಸನ್ಯಾಸದ ವೈಶಿಷ್ಟ್ಯಗಳನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು:

1) ಕಠಿಣ ಅಭ್ಯಾಸಗಳಿಂದ ಮತ್ತು ನಿತ್ಯ ನೂತನ ವಿಧಾನಗಳಿಂದ ತಮ್ಮ ಶರೀರವನ್ನು ದಂಡಿಸುವುದು. ಈ ವಿಷಯದಲ್ಲಿ ಪ್ರತಿಯೊಬ್ಬ ಸನ್ಯಾಸಿಯು ಇತರರಿಂದ ಮುಂದುವರಿಯಲು ಪೈಪೋಟಿ ನಡೆಸುತ್ತಿದ್ದರು.

ಕ್ರೈಸ್ತ ಸಂತರ ಇತಿಹಾಸದಲ್ಲಿ ಇದರ ಅನೇಕ ಉದಾಹರಣೆಗಳು ತುಂಬಿಕೊಂಡಿವೆ. ಒಬ್ಬರು ಮೂವತ್ತು ವರ್ಷಗಳ ಕಾಲ ಮೌನ ವ್ರತ ಆಚರಿಸಿದರು. ಇನ್ನೊಬ್ಬರು ತಮ್ಮನ್ನು ಒಂದು ಬಂಡೆಗೆ ಕಟ್ಟಿಹಾಕಿದರು. ಮತ್ತೊಬ್ಬರು ಕಾಡುಗಳಲ್ಲಿ ಅಲೆದಾಡುತ್ತಾ ಹುಲ್ಲುಗಳನ್ನು ತಿಂದು ಬದುಕುತ್ತಿದ್ದರು. ಒಬ್ಬರು ದೊಡ್ಡ ಹೊರೆಯೊಂದನ್ನು ತಮ್ಮ ಮೇಲೆ ಹೇರಿಕೊಂಡೇ ಇರುತ್ತಿದ್ದರು. ಇನ್ನೊಬ್ಬರು ಸಂಕೋಲೆಗಳಿಂದ ತಮ್ಮ ಅಂಗಾಂಗಗಳನ್ನು ಕಟ್ಟಿ ಹಾಕಿದ್ದರು. ಕೆಲವರು ಪ್ರಾಣಿಗಳ ದೊಡ್ಡಿಯಲ್ಲಿ, ಪಾಳುಬಾವಿಯಲ್ಲಿ ಅಥವಾ ಹಳೆಯ ಗೋರಿಯಲ್ಲಿ ಬಿದ್ದು ಕೊಂಡಿರುತ್ತಿದ್ದರು. ಇನ್ನು ಕೆಲವರು ಸದಾ ನಗ್ನರಾಗಿದ್ದು ತಮ್ಮ ದೀರ್ಘ ಕೂದಲಿನಿಂದ ತಮ್ಮ ಗುಪ್ತಾಂಗಗಳನ್ನು ಮರೆಸುತ್ತಿದ್ದರು. ನೆಲದಲ್ಲಿ ಹರಿದಾಡುತ್ತಾ ನಡೆಯುತ್ತಿದ್ದರು. ಇಂತಹ ಸಂತರ ಕಥೆಗಳು ಎಲ್ಲೆಡೆ ಪ್ರಚಾರದಲ್ಲಿದ್ದುವು. ಅವರ ಮರಣಾನಂತರ ಅವರ ಅಸ್ಥಿಪಂಜರವನ್ನು ಮಠಗಳಲ್ಲಿ ಸುರಕ್ಷಿತವಾಗಿಡಲಾಗುತ್ತಿತ್ತು. ಸೀನಾಯಿ ಪರ್ವತದ ಕೆಳಗೆ ಸಂತ ಕ್ಯಾಥರೀನ್ ಮಠದಲ್ಲಿ ಇಂತಹ ಅಸ್ಥಿಪಂಜರಗಳ ಒಂದು ರಾಶಿಯೇ ಇದೆ... ಕೆಲವು ಸಂತರ ತಲೆಬುರುಡೆಗಳು, ಕೆಲವರ ಕಾಲಿನ ಮೂಳೆ ಮತ್ತು ಕೆಲವರ ಕೈಗಳ ಮೂಳೆಗಳು ಇಡಲ್ಪಟ್ಟಿವೆ. ಓರ್ವ ಸಂತರ ಇಡೀ ದೇಹವನ್ನು ಒಂದು ಗಾಜಿನ ಕಪಾಟಿನಲ್ಲಿ ಇಡಲಾಗಿದೆ.

2) ಈ ಸಂತರುಗಳ ಎರಡನೆಯ ವಿಶೇಷತೆಯೇನೆಂದರೆ ಅವರು ಸದಾ ಮಲಿನವಾಗಿ ರುತ್ತಿದ್ದರು. ನೈರ್ಮಲ್ಯವನ್ನು ಅವರು ಸಂಪೂರ್ಣ ತೊರೆದಿದ್ದರು. ಸ್ನಾನ ಮಾಡುವುದು ಅಥವಾ ಮೈಗೆ ನೀರು ತಾಗಿಸುವುದು ಅವರ ಮಟ್ಟಿಗೆ ದೇವಭಕ್ತಿಗೆ ವಿರುದ್ಧವಾಗಿತ್ತು. ಶರೀರದ ನೈರ್ಮಲ್ಯ ವನ್ನು ಅವರು ಆತ್ಮದ ಮಾಲಿನ್ಯವೆಂದು ಪರಿಗಣಿಸುತ್ತಿದ್ದರು.

3) ಈ ಸನ್ಯಾಸವು ದಾಂಪತ್ಯ ಜೀವನವನ್ನು ನಿಷೇಧಿಸಿತ್ತು. 4 ಮತ್ತು 5ನೆಯ ಶತಮಾನದ ಎಲ್ಲ ಧಾರ್ಮಿಕ ಲೇಖನಗಳಲ್ಲೂ ಮದುವೆಯಾಗದಿರುವುದನ್ನು ದೊಡ್ಡ ನೈತಿಕ ಸಾಧನೆಯೆಂದು ಸಾರಲಾಗಿದೆ. ಶೀಲವಂತನೆಂದರೆ ವೈವಾಹಿಕ ಜೀವನವನ್ನು ಸಂಪೂರ್ಣವಾಗಿ ತೊರೆದವನು ಎಂದು ಪರಿಗಣಿಸಲಾಗಿತ್ತು. ಮನುಷ್ಯನು ತನ್ನ ಲೈಂಗಿಕ ಬಯಕೆಯನ್ನು ಸಂಪೂರ್ಣವಾಗಿ ನಿಗ್ರಹಿಸುವುದು ಆಧ್ಯಾತ್ಮಿಕ ಸಿದ್ಧಿಯ ಉನ್ನತ ಮಟ್ಟವೆನಿಸಿತು. ಅವರ ದೃಷ್ಟಿಯಲ್ಲಿ ಲೈಂಗಿಕ ಬಯಕೆಯಿಂದ ಮನುಷ್ಯನಲ್ಲಿ ಪಶುತ್ವವು ಬೆಳೆಯುತ್ತದೆ. ಕಾಮ ಮತ್ತು ಪಾಪ ಅವರ ದೃಷ್ಟಿಯಲ್ಲಿ ಸಮಾನಾರ್ಥದ ಪದಗಳಾಗಿದ್ದುವು. ಸಂತೋಷವನ್ನು ಅವರು ದೇವಭಕ್ತಿಗೆ ಅತೀತವೆಂದು ಬಗೆಯುತ್ತಿದ್ದರು. ನಗುವುದು ಅವರಿಗೆ ನಿಷಿದ್ಧವಾಗಿತ್ತು ಈ ಸಿದ್ಧಾಂತದ ಕಾರಣ ಪತಿ-ಪತ್ನಿಯ ಸಂಬಂಧವು ಮಲಿನವೆನಿಸಿತು. ಸನ್ಯಾಸಿಯಾಗುವವನು ಮದುವೆಯಾಗುವುದನ್ನು ಮಾತ್ರವಲ್ಲ ಮಹಿಳೆಯನ್ನು ನೋಡುವುದನ್ನು ಕೂಡಾ ತೊರೆಯಬೇಕಿತ್ತು. ವಿವಾಹಿತನಾಗಿದ್ದರೆ ಪತ್ನಿಯನ್ನು ತೊರೆದು ಬರಬೇಕಾಗಿತ್ತು. ಪುರುಷರಂತೆ ಸ್ತ್ರೀಯರಲ್ಲೂ ಈ ವಿಚಾರವು ಪ್ರಚಾರ ಪಡೆಯಿತು. ಅವರು ಸದಾ ಕುಮಾರಿಯರಾಗಿಯೇ ಇರಬೇಕು. ಮದುವೆಯಾಗಿದ್ದರೆ ಪತಿಯನ್ನು ತೊರೆದು ಬರಬೇಕು.

ಪ್ರಸಿದ್ಧ ಕ್ರೈಸ್ತ ವಿದ್ವಾಂಸರಾದ ಸಂತ ಜೆರೋಮ್ ಅವರ ಪ್ರಕಾರ ಮಹಿಳೆಯು ಕ್ರಿಸ್ತನಿಗಾಗಿ ಸನ್ಯಾಸಿನಿಯಾದರೆ ಮತ್ತು ಜೀವನವಿಡೀ ಕುಮಾರಿಯಾಗಿದ್ದರೆ ಆಕೆ ಕ್ರಿಸ್ತನ ಮದುಮಗಳಾಗುವಳು. ಆಕೆಯ ತಾಯಿ ಏಸುವಿನ ಅತ್ತೆ (Mother-in-Law of God) ಆಗುವಳು. ಈ ವಿಚಾರಗಳಿಂದಾಗಿ ಒಬ್ಬನು ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ ಕೂಡಲೇ ಅವನ ವೈವಾಹಿಕ ಜೀವನವು ಕೊನೆಗೊಳ್ಳುತ್ತಿತ್ತು. ಕ್ರೈಸ್ತರಲ್ಲಿ ವಿವಾಹ ವಿಚ್ಛೇದನವೆಂಬುದು ಇಲ್ಲದ ಕಾರಣ ವಿವಾಹ ಬಂಧನವು ಊರ್ಜಿತವಾಗಿರುವಂತೆಯೇ ಪತಿ-ಪತ್ನಿಯರು ಪರಸ್ಪರ ಬೇರ್ಪಡುತ್ತಿದ್ದರು.

ಕ್ರೈಸ್ತ ಚರ್ಚ್‌ನ ವ್ಯವಸ್ಥೆಯು ಮೂರು ಶತಮಾನಗಳ ತನಕ ಈ ಉಗ್ರವಾದಿ ವಿಚಾರಗಳನ್ನು ವಿರೋಧಿಸುತ್ತಿತ್ತು. ಆ ಕಾಲದಲ್ಲಿ ಓರ್ವ ಪಾದ್ರಿಗೆ ವಿವಾಹವಾಗದಿರುವುದು ಕಡ್ಡಾಯವಾಗಿರಲಿಲ್ಲ. ಒಂದು ವೇಳೆ ಆತ ಪಾದ್ರಿಯಾಗುವ ವೇಳೆಗೆ ಮದುವೆಯಾಗಿದ್ದರೆ ತನ್ನ ಪತ್ನಿಯ ಜತೆ ಸಂಪರ್ಕವಿರಿಸಬಹುದಾಗಿತ್ತು. ಪಾದ್ರಿಯಾಗಿ ನೇಮಕಗೊಂಡ ಬಳಿಕ ಮಾತ್ರ ವಿವಾಹವಾಗುವುದು ನಿಷಿದ್ಧವಾಗಿತ್ತು. ಓರ್ವ ವಿಧವೆ ಅಥವಾ ಪರಿತ್ಯಕ್ತ ಮಹಿಳೆಯನ್ನು ಮದುವೆಯಾದವನು ಅಥವಾ ಇಬ್ಬರು ಪತ್ನಿಯರನ್ನು ಹೊಂದಿರುವವನು ಪಾದ್ರಿಯಾಗುವಂತಿರಲಿಲ್ಲ. ನಾಲ್ಕನೆಯ ಶತಮಾನದ ವೇಳೆಗೆ ಪಾದ್ರಿ ಮದುವೆಯಾಗುವುದು ನಿಷಿದ್ಧವೆಂದೇ ಸಾರಲಾಯಿತು. ಕ್ರಿ.ಶ. 362ರಲ್ಲಿ ನಡೆದ ಗಿಂಗ್ರಾ ಪರಿಷತ್ತಿ(Gingra Council)ನಲ್ಲಿ ಕೊನೆಯ ಬಾರಿಗೆ ಇಂತಹ ವಿಚಾರಗಳನ್ನು ಧರ್ಮಬಾಹಿರವೆಂದು ಘೋಷಿಸಲಾಗಿತ್ತು. ಕ್ರಿ.ಶ. 386ರ ವೇಳೆಗೆ ರೋಮನ್ ಸಿನಾಡ್ (Synod) ವೈವಾಹಿಕ ಸಂಬಂಧಗಳಿಂದ ದೂರವಿರುವಂತೆ ಎಲ್ಲ ಪಾದ್ರಿಗಳಿಗೆ ಆದೇಶ ನೀಡಿದನು. ಮರುವರ್ಷ ಪೋಪ್ ಸ್ಯಾರಿಕಿಯಸ್ (Siricius) ಅವರ ಆದೇಶದ ಪ್ರಕಾರ ಮದುವೆಯಾಗುವ ಪಾದ್ರಿಯನ್ನು ಅಥವಾ ಈಗಾಗಲೇ ಮದುವೆಯಾದವನು ಪಾದ್ರಿಯಾಗಿದ್ದು ತನ್ನ ಪತ್ನಿಯೊಂದಿಗೆ ಸಂಪರ್ಕವಿರಿಸಿಕೊಂಡಿದ್ದರೆ ಅವನನ್ನು ಹುದ್ದೆಯಿಂದ ವಜಾಗೊಳಿಸಲಾಗುವುದೆಂಬ ಆದೇಶ ಜಾರಿಗೆ ಬಂತು. ಸಂತ ಜೆರೋಮ್, ಸಂತ ಎಂಬ್ರೋಸ್ ಮತ್ತು ಸಂತ ಆಗಸ್ಟಾಯಿನ್‌ರಂಥ ಉನ್ನತ ವಿದ್ವಾಂಸರು ಈ ನಿರ್ಣಯವನ್ನು ಬಲವಾಗಿ ಬೆಂಬಲಿಸಿದರು. ಒಂದಿಷ್ಟು ವಿರೋಧದ ಬಳಿಕ ಇಡೀ ಕ್ರೈಸ್ತ ಚರ್ಚ್‌ನಲ್ಲಿ ಈ ನಿಯಮವು ಜಾರಿಗೊಂಡಿತು.

4) ಈ ಪೌರೋಹಿತ್ಯ ಮತ್ತು ಸನ್ಯಾಸದ ಅತ್ಯಂತ ದುಃಖದಾಯಕ ಅಂಶವೆಂದರೆ ಅದು ತಂದೆ-ತಾಯಿ, ಅಣ್ಣ-ತಂಗಿ ಮತ್ತು ಮಕ್ಕಳ ಜತೆಗಿನ ಸಂಬಂಧವನ್ನು ಕೂಡಾ ಕಡಿದು ಹಾಕಿತ್ತು. ಕ್ರೈಸ್ತ ಪಾದ್ರಿಗಳ ದೃಷ್ಟಿಯಲ್ಲಿ ತಂದೆ-ತಾಯಿಗಳಿಗೆ ಮಗನ ಪ್ರೀತಿ, ಸೋದರನಿಗೆ ಸೋದರ-ಸೋದರಿಯರ ಪ್ರೀತಿ ಮತ್ತು ಮಗನಿಗೆ ತಂದೆ ತಾಯಿಗಳ ಪ್ರೀತಿ ಕೂಡಾ ಅಪರಾಧವಾಗಿತ್ತು. ಅವರ ನಂಬಿಕೆಯಂತೆ ಆಧ್ಯಾತ್ಮಿಕ ಉನ್ನತಿಗಾಗಿ ಮನುಷ್ಯನು ಈ ಎಲ್ಲ ಸಂಬಂಧಗಳನ್ನು ಮುರಿಯಬೇಕಾಗಿತ್ತು. ಕ್ರೈಸ್ತ ಸಂತರ ವೃತ್ತಾಂತಗಳಲ್ಲಿ ಮನುಷ್ಯನ ಮನ ಕರಗಿಸುವಂತಹ ಹಲವಾರು ಘಟನೆಗಳು ಸಿಗುತ್ತವೆ.

ಇವಾಗ್ರಿಯಸ್ ಎಂಬ ಓರ್ವ ಸಂತ ವರ್ಷಗಟ್ಟಲೆ ಮರುಭೂಮಿಯಲ್ಲಿ ಆಧ್ಯಾತ್ಮಿಕ ಸಾಧನೆಗಳನ್ನು ಮಾಡುತ್ತಿದ್ದನು. ಒಂದು ದಿನ ಅವನಿಗೆ ಅವನ ತಂದೆ ತಾಯಿಗಳ ಒಂದು ಪತ್ರ ತಲುಪಿತು. ಅವರು ವರ್ಷಗಟ್ಟಲೆ ಅವನಿಂದ ದೂರವಿದ್ದು ವಿರಹ ವೇದನೆಯನ್ನು ಅನುಭವಿಸುತ್ತಿದ್ದರು. ಆ ಕಾಗದವನ್ನು ಓದಿದರೆ ಎಲ್ಲಿ ತನ್ನಲ್ಲಿರುವ ಮಾನವ ಪ್ರೇಮ ಜಾಗೃತವಾಗಿ ಬಿಡುವುದೋ ಎಂಬ ಭಯದಿಂದ ಆ ಪತ್ರವನ್ನು ಒಡೆಯದೆ ಹಾಗೆಯೇ ಬೆಂಕಿಗೆಸೆದು ಬಿಟ್ಟನು.

ಸಂತ ಥಿಯೋಡೋರಸ್‌ನ ತಾಯಿ ಮತ್ತು ಸೋದರಿ ಅನೇಕ ಪಾದ್ರಿಗಳ ಶಿಫಾರಸ್ಸು ಪತ್ರಗಳೊಂದಿಗೆ ಅವರಿರುವ ಮಠಕ್ಕೆ ತಲುಪಿದರು. ಆದರೆ ಆತ ಅವರ ಮುಂದೆ ಬರಲಿಕ್ಕೇ ನಿರಾಕರಿಸಿದ.

ಸಂತ ಪೊಯಿಮನ್ (St.Poemen) ಮತ್ತು ಅವನ ಆರು ಮಂದಿ ಸೋದರರು ಒಂದು ಮರುಭೂಮಿಯ ಮಠದಲ್ಲಿದ್ದರು. ಅನೇಕ ವರ್ಷಗಳ ಬಳಿಕ ಅವರ ಮುದಿ ತಾಯಿಗೆ ಅವರ ವಿಳಾಸ ಸಿಕ್ಕಿತು. ಆಕೆ ಅವರನ್ನು ಭೇಟಿಯಾಗಲು ಅಲ್ಲಿಗೆ ಬಂದಳು. ಮಕ್ಕಳು ದೂರದಿಂದ ತಾಯಿಯನ್ನು ಕಂಡು ಓಡಿ ಹೋಗಿ ತಮ್ಮ ಕೋಣೆ ಸೇರಿ ಬಾಗಿಲು ಮುಚ್ಚಿಕೊಂಡರು. ತಾಯಿ ಹೊರಗೆ ಕುಳಿತು ಅಳುತ್ತಿದ್ದಳು. ಆಕೆ ಬೊಬ್ಬೆ ಹಾಕುತ್ತಾ ಈ ಮುದಿ ಪ್ರಾಯದಲ್ಲಿ ಕೇವಲ ನಿಮ್ಮನ್ನು ನೋಡಲಿಕ್ಕಾಗಿ ಇಷ್ಟು ದೂರ ತಾನು ನಡೆದುಕೊಂಡು ಬಂದಿರುವೆನೆಂದು ಹೇಳಿದಳು. ನನಗೆ ಮುಖತೋರಿಸಿದರೆ ನಿಮ್ಮದೇನು ನಷ್ಟವೆಂದು ಕೇಳಿಕೊಂಡಳು. ತಾನು ನಿಮ್ಮ ತಾಯಿಯಲ್ಲವೇ ಎಂದು ಮೊರೆಯಿಟ್ಟಳು. ಆದರೆ ಆ ಸಂತರು ಬಾಗಿಲು ತೆರೆಯಲಿಲ್ಲ. ನಿನ್ನನ್ನು ದೇವರ ಬಳಿ ಭೇಟಿಯಾಗುತ್ತೇವೆಂದು ಒಳಗಿಂದಲೇ ತಿಳಿಸಿದರು.

ಈ ಸಂತರುಗಳು ತಮ್ಮ ಸೋದರಿಯರು ಮತ್ತು ಮಕ್ಕಳೊಂದಿಗೂ ಇದೇ ರೀತಿ ನಿರ್ದಯೆಯಿಂದ ವರ್ತಿಸಿದರು. ಮೂಟಿಯಸ್ (Mutius) ಎಂಬೋರ್ವ ಶ್ರೀಮಂತ ವ್ಯಕ್ತಿಯಿದ್ದನು. ಆತನಲ್ಲಿ ಧಾರ್ಮಿಕತೆಯ ಭಾವನೆ ಜಾಗೃತಗೊಂಡಾಗ ಆತ ತನ್ನ ಎಂಟು ವರ್ಷ ಪ್ರಾಯದ ಏಕಮಾತ್ರ ಪುತ್ರನ ಜತೆ ಒಂದು ಮಠಕ್ಕೆ ಹೋದನು. ಅಲ್ಲಿ ಅವನ ಆಧ್ಯಾತ್ಮಿಕ ಉನ್ನತಿಗೆ ಅವನು ತನ್ನ ಹೃದಯದಿಂದ ಪುತ್ರ ಪ್ರೇಮವನ್ನು ನೀಗಿಸುವುದು ಅಗತ್ಯವಾಗಿತ್ತು. ಆದ್ದರಿಂದ ಆತ ತನ್ನ ಪುತ್ರನನ್ನು ತನ್ನಿಂದ ಬೇರ್ಪಡಿಸಿದನು. ಅವನ ಕಣ್ಣ ಮುಂದೆಯೇ ಆ ಮಗನ ಮೇಲೆ ತರತರದ ಸಂಕಷ್ಟಗಳನ್ನು ಹೇರಲಾಯಿತು. ಅವನು ಎಲ್ಲವನ್ನೂ ಮೌನವಾಗಿ ನೋಡುತ್ತಿದ್ದನು. ಅನಂತರ ಮಠಾಧೀಶರ ಆದೇಶದಂತೆ ಅವನನ್ನು ಒಂದು ನದಿಗೆ ಎಸೆದು ಬಿಟ್ಟನು. ಆದರೆ ಇತರ ಸಂತರು ಆ ಮಗುವನ್ನು ರಕ್ಷಿಸಿದರು. ಆತ ಸಂತನ ಪದವಿಗೆ ತಲುಪಿರು ವನೆಂದು ಆಗ ದೃಢೀಕರಿಸಲಾಯಿತು.

ಈ ಬಗ್ಗೆ ಕ್ರೈಸ್ತ ಪೌರೋಹಿತ್ಯದ ನಿಲುಮೆ ಏನಾಗಿತ್ತೆಂದರೆ ಯಾರು ದೇವರ ಪ್ರೀತಿಯನ್ನು ಬಯಸುತ್ತಾನೋ ಆತ ಮಾನವ ಪ್ರೀತಿಯ ಎಲ್ಲ ಸಂಕೋಲೆಗಳನ್ನು

ಕಿತ್ತೆಸೆಯಬೇಕು. ಸಂತ ಜೆರೋಮ್ ಅವರು ಹೀಗೆ ಹೇಳಿರುವರು: "ನಿನ್ನ ಸೋದರ ಪುತ್ರ ನಿನ್ನ ಕೊರಳಿಗೆ ಜೋತು ಬಿದ್ದರೂ, ನಿನ್ನ ತಾಯಿ ನಿನಗೆ ತನ್ನ ಮೊಲೆಹಾಲಿನ ಆಣೆ ಹಾಕಿದರೂ, ನಿನ್ನ ತಂದೆ ನಿನ್ನ ಹಾದಿಯಲ್ಲಿ ಅಡ್ಡವಾಗಿ ಮಲಗಿದರೂ ನೀನು ಅವರೆಲ್ಲರನ್ನೂ ತೊರೆದು ತಂದೆಯ ದೇಹ ವನ್ನು ತುಳಿದು ಒಂದೇ ಒಂದು ತೊಟ್ಟು ಕಣ್ಣೀರು ಸುರಿಸದೆ ಶಿಲುಬೆಯ ಧ್ವಜದ ಕಡೆಗೆ ಧಾವಿಸಬೇಕು. ಈ ವಿಷಯದಲ್ಲಿ ದಯೆ ತೋರದಿರುವುದೇ ದೇವಭಕ್ತಿಯಾಗಿದೆ."

5) ತಮ್ಮ ನಿಕಟ ಬಂಧುಗಳ ಜತೆ ದಯೆ ದಾಕ್ಷಿಣ್ಯವಿಲ್ಲದಿರುವಿಕೆ, ಕಠೋರ ವರ್ತನೆ ಗಳಿಂದಾಗಿ ಅವರಲ್ಲಿದ್ದ ಮಾನವೀಯ ಭಾವನೆಗಳು ಸತ್ತು ಹೋಗುತ್ತಿದ್ದುವು. ಆದ್ದರಿಂದಲೇ ಅವರಿಗೆ ಯಾರೊಂದಿಗೆ ಧಾರ್ಮಿಕ ಭಿನ್ನಾಭಿಪ್ರಾಯಗಳಿದ್ದುವೋ ಅವರ ವಿರುದ್ಧ ಎಲ್ಲ ರೀತಿಯ ಅನ್ಯಾಯ ಅತ್ಯಾಚಾರಗಳನ್ನು ಅವರು ಎಸಗುತ್ತಿದ್ದರು. ಕ್ರಿ.ಶ. ನಾಲ್ಕನೆಯ ಶತಮಾನದ ವೇಳೆಗೆ ಕ್ರೈಸ್ತರಲ್ಲಿ ಸುಮಾರು 80-90 ಪಂಗಡಗಳಾದುವು. ಸಂತ ಆಗಸ್ಟಿನ್‌ನ ಕಾಲದಲ್ಲಿ 88 ಪಂಗಡಗಳಿದ್ದುವೆಂದು ಅವರು ಉಲ್ಲೇಖಿಸಿದ್ದಾರೆ. ಈ ಪಂಗಡಗಳು ಪರಸ್ಪರ ತೀವ್ರ ಶತ್ರುತ್ವವನ್ನು ಬೆಳೆಸಿಕೊಂಡಿದ್ದುವು. ಈ ಶತ್ರುತ್ವದ ಕಿಚ್ಚನ್ನು ಪೋಷಿಸುವವರು ಸನ್ಯಾಸಿಗಳೇ ಆಗಿದ್ದರು. ತಮ್ಮ ವಿರೋಧಿಗಳನ್ನು ಈ ಕಿಚ್ಚಿನಲ್ಲಿ ಬೇಯಿಸಿ ಬಿಡುವುದರಲ್ಲಿ ಅವರು ಪರಸ್ಪರ ಪೈಪೋಟಿ ನಡೆಸುತ್ತಿದ್ದರು.

ಈಜಿಪ್ಟ್‌ನಲ್ಲಿ ಕೆಥೋಲಿಕ್ ಪಂಗಡದ ಮೇಲುಗೈ ಆದಾಗ ಅವರೂ ಏರಿಯನ್ ಪಂಗಡದ ಜತೆ ಇದನ್ನೇ ಮಾಡಿದರು. ಸ್ವತಃ ಏರಿಯಸ್(Arius)ನನ್ನು ವಿಷ ಉಣಿಸಿ ಕೊಲ್ಲಲಾಯಿತೆಂದೂ ವರದಿಗಳಿವೆ.

ಅಲೆಕ್ಸಾಂಡ್ರಿಯದಲ್ಲೇ ಒಮ್ಮೆ ಸಂತ ಸಿರಿಲ್‌ನ (St. Cyril) ಶಿಷ್ಯರಾದ ಸನ್ಯಾಸಿಗಳು ಗಲಾಟೆಯೆಬ್ಬಿಸಿದರು. ವಿರೋಧಿ ಪಂಗಡದ ಸನ್ಯಾಸಿನಿಯೊಬ್ಬಳನ್ನು ಚರ್ಚ್‌ಗೆ ಒಯ್ದು ಕೊಂದು ಹಾಕಿದರು. ಆಕೆಯ ಶವವನ್ನು ತುಂಡುತುಂಡು ಮಾಡಿ ಬೆಂಕಿಗೆ ಹಾಕಿದರು. ರೋಮ್‌ನ ಸ್ಥಿತಿಯೂ ಇದುವೇ ಆಗಿತ್ತು. ಕ್ರಿ.ಶ. 366ರಲ್ಲಿ ಪೋಪ್ ಲಿಬರಿಯಸ್ (Liberius) ಅವರ ನಿಧನದ ಬಳಿಕ ಎರಡು ಪಂಗಡಗಳು ಪೋಪ್ ಪದವಿಗೆ ತಂತಮ್ಮ ಉಮೇದ್ವಾರರನ್ನು ನಿಲ್ಲಿಸಿದರು. ಎರಡು ಪಂಗಡಗಳ ಮಧ್ಯೆ ಘೋರ ಕಾಳಗವಾಯಿತು. ಒಂದೇ ದಿನದಲ್ಲಿ ಕೇವಲ ಒಂದು ಚರ್ಚ್‌ನಿಂದ 137 ಶವಗಳನ್ನು ಹೊರತೆಗೆಯಲಾಯಿತು.

6) ಈ ವೈರಾಗ್ಯ, ಸನ್ಯಾಸ, ಬಡತನ ಮತ್ತು ಸಾತ್ವಿಕತೆಯ ಜತೆಗೆ ಲೌಕಿಕ ಸಿರಿಸಂಪತ್ತು ಶೇಖರಿಸುವಲ್ಲಿ ಯಾವುದೇ ಕೊರತೆ ಮಾಡಲಿಲ್ಲ. ಐದನೆಯ ಶತಮಾನದ ಆರಂಭದಲ್ಲಿ ಪರಿಸ್ಥಿತಿ ಹೇಗಿತ್ತೆಂದರೆ ರೋಮ್‌ನ ಬಿಷಪ್ ರಾಜರುಗಳಂತೆ ತನ್ನ ಅರಮನೆಯಲ್ಲಿ ವಾಸಿಸುತ್ತಿದ್ದ. ಅವನು ನಗರದಲ್ಲಿ ಸಂಚರಿಸುವಾಗ ಅವನ ವೈಭವವು ಕೈಸರ್ ಚಕ್ರವರ್ತಿಯ ಸವಾರಿಗಿಂತ ಕಡಿಮೆಯಿರಲಿಲ್ಲ. ಸಂತ ಜೆರೋಮನ ಹೇಳಿಕೆಯಂತೆ ಅನೇಕ ಬಿಷಪ್‌ಗಳ ಸತ್ಕಾರ ಕೂಟಗಳು ಗವರ್ನರ್‌ಗಳ ಸತ್ಕಾರ ಕೂಟಗಳನ್ನು ನಾಚಿಸು ವಂತಿದ್ದುವು. ಕ್ರೈಸ್ತ ಮಠಗಳ ಕಡೆಗೆ ಸಂಪತ್ತಿನ ಈ ಹರಿವು ಏಳನೆಯ ಶತಮಾನಕ್ಕೆ (ಪವಿತ್ರ

ಕುರ್‌ಆನಿನ ಅವತೀರ್ಣ ಕಾಲಕ್ಕೆ) ತಲುಪುವಾಗ ಪ್ರವಾಹದ ರೂಪ ತಾಳಿತು. ಒಬ್ಬನಿಂದ ಮಹಾ ಪಾಪ ಕಾರ್ಯವೇನಾದರೂ ಸಂಭವಿಸಿದರೆ ಅದರ ಪಾಪ ಪರಿಹಾರಕ್ಕಾಗಿ ಯಾವನಾದರೂ ಸಂತನ ಗೋರಿಗೆ ಹರಕೆ ಹೊರಬೇಕು, ಯಾವುದಾದರೂ ಮಠ ಅಥವಾ ಚರ್ಚ್‌ಗೆ ಕಾಣಿಕೆ ಸಲ್ಲಿಸಲೇಬೇಕು ಎಂಬ ನಂಬಿಕೆ ವ್ಯಾಪಕವಾಗಿತ್ತು. ಅನಂತರ ಯಾವ ಲೌಕಿಕ ಸಂಪತ್ತಿನಿಂದ ದೂರವಿರುವುದು ಸನ್ಯಾಸದ ವೈಶಿಷ್ಟ್ಯ ವೆನಿಸಿತ್ತೋ ಅದುವೇ ಅವರ ಪಾದಗಳಲ್ಲಿ ಬಂದು ರಾಶಿ ಬೀಳತೊಡಗಿತು. ಸನ್ಯಾಸಿಗಳ ಆಧ್ಯಾತ್ಮಿಕ ಸಾಧನೆಗಳು ಮತ್ತು ಅವರ ಆತ್ಮ ನಿಗ್ರಹವನ್ನು ಕಂಡು ಜನಮನದಲ್ಲಿ ಅವರ ಬಗ್ಗೆ ಅಪಾರ ಶ್ರದ್ಧೆ ಉಂಟಾದಾಗ ಅನೇಕ ಲೌಕಿಕ ವೈಭವದ ಪೂಜಾರಿಗಳು ಸನ್ಯಾಸದ ವೇಷ ತೊಟ್ಟು ಕ್ರೈಸ್ತ ಸನ್ಯಾಸಿಗಳ ಕೂಟವನ್ನು ಸೇರಿದರು. ಅವರು ಸನ್ಯಾಸದ ಹೆಸರಲ್ಲಿ ಸಂಪತ್ತು ಶೇಖರಣೆಯ ವ್ಯವಹಾರ ಕುದುರಿಸಿಕೊಂಡರು. ಇದುವೇ ಅವರ ಅವನತಿಗೆ ಪ್ರಮುಖ ಕಾರಣವಾಗಿತ್ತು.

7) ವಿಷಯಾಸಕ್ತಿಯ ನಿಗ್ರಹದ ವಿಷಯದಲ್ಲೂ ಪ್ರಕೃತಿಯೊಂದಿಗೆ ಹೋರಾಟ ಮಾಡಿ ಸನ್ಯಾಸವು ಪದೇ ಪದೇ ಸೋಲನುಭವಿಸಿತ್ತು. ಮಠಗಳಲ್ಲಿ ಆತ್ಮನಿಗ್ರಹದ ಸಾಧನೆಯ ಉಪಾಧಿಯೆಂಬ ರೀತಿಯಲ್ಲಿ ಸನ್ಯಾಸಿಗಳು ಮತ್ತು ಸನ್ಯಾಸಿನಿಯರು ಜತೆಯಾಗಿ ಒಂದೆಡೆ ವಾಸಿಸುತ್ತಿದ್ದರು. ಹಲವು ವೇಳೆ ಹೆಚ್ಚಿನ ಸಾಧನೆಗಾಗಿ ಇಬ್ಬರೂ ಒಂದೇ ಹಾಸಿಗೆಯಲ್ಲಿ ರಾತ್ರಿ ಕಳೆಯುತ್ತಿದ್ದರು. ಪ್ರಖ್ಯಾತ ಸಂತರಾದ ಸಂತ ಇವಾಗ್ರಿಯಸ್ ತಮ್ಮ ಕಾಮನೆಗಳ ಮೇಲೆ ಪೂರ್ಣ ಹತೋಟಿ ಸಾಧಿಸಿದ ಫೆಲೆಸ್ತೀನಿನ ಸನ್ಯಾಸಿಗಳ ವೃತ್ತಾಂತವನ್ನು ಹೀಗೆ ವರ್ಣಿಸುತ್ತಾರೆ: ಅವರು ಮಹಿಳೆ ಯರ ಜತೆ ಒಟ್ಟಿಗೆ ಸ್ನಾನ ಮಾಡುತ್ತಿದ್ದರು. ಅವರನ್ನು ನೋಡುವುದರಿಂದ, ಸ್ಪರ್ಶಿಸುವುದರಿಂದ, ಅವರ ಆಲಿಂಗನದಿಂದಲೂ ಅವರಲ್ಲಿ ಯಾವುದೇ ರೀತಿಯ ವಿಷಯಾಸಕ್ತಿ ಉಂಟಾಗುತ್ತಿರಲಿಲ್ಲ ವಂತೆ. ಸ್ನಾನವು ಸನ್ಯಾಸಿಗಳ ಪಾಲಿಗೆ ಅಪ್ರಿಯವಾಗಿದ್ದರೂ ಈ ರೀತಿಯ ಆತ್ಮನಿಗ್ರಹದ ಸಾಧನೆಗಾಗಿ ಅವರು ಅದನ್ನು ಮಾಡುತ್ತಿದ್ದರು. ಇದೇ ಫೆಲೆಸ್ತೀನ್‌ನ ಕುರಿತು ಕಟ್ಟಕಡೆಗೆ ನೀಸ್ಸಾದ (Nyssa) ಸಂತ ಗ್ರೆಗೋರಿಯವರು (ನಿಧನ: ಕ್ರಿ.ಶ. 396) ಅದು ವ್ಯಭಿಚಾರದ ಕೇಂದ್ರವಾಗಿ ಮಾರ್ಪಟ್ಟಿತೆಂದು ಬರೆದಿರುವರು. ಮಾನವ ಪ್ರಕೃತಿಯು ಅದರ ವಿರುದ್ಧ ಯುದ್ಧ ಮಾಡುವವ ರಿಂದ ಪ್ರತೀಕಾರ ತೀರಿಸದೆ ಇರುವುದಿಲ್ಲ. ಸನ್ಯಾಸವು ಮಾನವ ಪ್ರಕೃತಿಯ ವಿರುದ್ಧ ಯುದ್ಧ ಹೂಡಿತು. ಕೊನೆಗೆ ಅದು ಅನೈತಿಕತೆಯ ಕೂಪಕ್ಕೆ ಬಿತ್ತು. ಅದರ ವೃತ್ತಾಂತವು ಎಂಟನೆಯ ಶತಮಾನದಿಂದ ಹನ್ನೊಂದನೆಯ ಶತಮಾನದ ವರೆಗಿನ ಇತಿಹಾಸದ ಕರಾಳ ಅಧ್ಯಾಯ ವಾಗಿದೆ. ಹತ್ತನೆಯ ಶತಮಾನದ ಓರ್ವ ಇಟಾಲಿಯನ್ ಬಿಷಪ್ ಈ ರೀತಿ ಬರೆದಿರುವರು: "ಧಾರ್ಮಿಕ ಸೇವೆ ಮಾಡುವವರ ವಿರುದ್ಧ ಅನೈತಿಕತೆಗಾಗಿ ಶಿಕ್ಷೆಯನ್ನು ಜಾರಿಗೊಳಿಸಿದರೆ ಹುಡುಗರ ಹೊರತು ಯಾರೂ ಅದರಿಂದ ಪಾರಾಗಲಾರರು. ಜಾರ ಸಂತತಿಗಳನ್ನು ಧಾರ್ಮಿಕ ಸೇವೆಯಿಂದ ಮುಕ್ತ ಗೊಳಿಸುವ ನಿಯಮ ಜಾರಿಗೊಳಿಸಿದರೆ ಚರ್ಚ್‌ನ ಸೇವೆಗೆ ಬಹುಶಃ ಒಬ್ಬನೇ ಒಬ್ಬ ಹುಡುಗ ಸಿಗಲಾರನು. ಮಧ್ಯ ಯುಗದ ಇತಿಹಾಸವು ಇಂತಹ

ವೃತ್ತಾಂತಗಳಿಂದ ತುಂಬಿಹೋಗಿದೆ-ಸನ್ಯಾಸಿನಿಯರ ಮಠಗಳು ಅನೈತಿಕತೆಯ ಕೇಂದ್ರಗಳಾಗಿವೆ. ಅವರ ಮಠಗಳಲ್ಲಿ ನವಜಾತ ಶಿಶುಗಳ ಸಾಮೂಹಿಕ ಹತ್ಯೆ ನಡೆಯುತ್ತದೆ. ಪಾದ್ರಿಗಳು ಮತ್ತು ಚರ್ಚ್‌ನ ಸೇವಕರು ಆಪ್ತ ಸಂಬಂಧಿಕರ ಜತೆಯೂ ಅನೈತಿಕ ಸಂಬಂಧವಿರಿಸುತ್ತಾರೆ. ಮಠಗಳಲ್ಲಿ ಪ್ರಕೃತಿಗೆ ವಿರುದ್ಧ ವಾದ ಲೈಂಗಿಕ ಅಪರಾಧಗಳು ಕೂಡ ವ್ಯಾಪಿಸಿವೆ. ಚರ್ಚ್‌ಗಳಲ್ಲಿ ನಡೆಯುವ ತಪ್ಪೊಪ್ಪಿಗೆಯ (Confession) ಸಂಪ್ರದಾಯವು ಅನೈತಿಕತೆಯ ಪರಿಹಾರ ಸಾಧನವಾಗಿ ಮಾರ್ಪಟ್ಟಿದೆ."

## ಈಸಾರ(ಅ) ಪುನರಾಗಮನ

ಪ್ರವಾದಿ ಈಸಾ(ಅ) ಅವರು ಇಹಲೋಕಕ್ಕೆ ಪುನಃ ಅವತರಿಸಿ ಬರುವ ಕುರಿತು ಪವಿತ್ರ ಕುರ್‌ಆನಿನಲ್ಲಿ ಯಾವುದೇ ಉಲ್ಲೇಖವಿಲ್ಲ. ಆದರೆ ಅವರು ಶಿಲುಬೆಗೇರಿಸಲ್ಪಡಲಿಲ್ಲ, ಕೊಲ್ಲಲ್ಪಡಲಿಲ್ಲ ಮತ್ತು ನಿಧನ ಹೊಂದಲಿಲ್ಲ ಎಂದು ಸ್ಪಷ್ಟವಾಗಿ ಸಾರುತ್ತದೆ. ಅವರನ್ನು ಅಲ್ಲಾಹನು ಎತ್ತಿಕೊಂಡನೆಂದೂ ಕುರ್‌ಆನ್ ಹೇಳುತ್ತದೆ. ಆದ್ದರಿಂದ ಅವರು ಸಹಜ ಮರಣಕ್ಕೆ ಮುಂಚಿತವಾಗಿ ಪುನಃ ಈ ಭೂಮಿಗೆ ಆಗಮಿಸಲಿರುವರೆಂದು ಪ್ರವಾದಿ ಮುಹಮ್ಮದ್(ಸ) ಅವರು ತಮ್ಮ ಅನೇಕ ವಚನಗಳ ಮೂಲಕ ಸ್ಪಷ್ಟಪಡಿಸಿರುವರು. ಅವುಗಳ ಪೈಕಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗುತ್ತಿದೆ.:

"ನನ್ನ ಪ್ರಾಣವು ಯಾರ ಕೈಯಲ್ಲಿದೆಯೋ ಅವನ ಆಣೆ, ಮರ್ಯಮರ ಪುತ್ರ ಖಂಡಿತವಾಗಿಯೂ ನಿಮ್ಮ ಮಧ್ಯೆ ನ್ಯಾಯಪೂರ್ಣ ಆಡಳಿತಗಾರನಾಗಿ ಇಳಿಯುವರು. ಅನಂತರ ಅವರು ಶಿಲುಬೆಗಳನ್ನು ಕೆಡಹುವರು, ಹಂದಿಯನ್ನು ವಧಿಸುವರು, ಯುದ್ಧವನ್ನು ಕೊನೆ ಗೊಳಿಸುವರು, (ಇನ್ನೊಂದು ವರದಿಯಲ್ಲಿ ಯುದ್ಧದ ಬದಲು ಜಿಝಿಯಾದ ಪ್ರಸ್ತಾಪವಿದೆ. ಅರ್ಥಾತ್ ಜಿಝಿಯಾವನ್ನು ಕೊನೆಗೊಳಿಸುವರು) ಅಂದು ಸಂಪತ್ತು ಎಷ್ಟು ಹೇರಳವಾಗಿರುವುದೆಂದರೆ ಅದನ್ನು ಸ್ವೀಕರಿಸುವವನು ಯಾರೂ ಇರಲಾರನು ಮತ್ತು ಜನರ ಪಾಲಿಗೆ ಅಲ್ಲಾಹನ ಮುಂದೆ ಒಂದು ಸಾಷ್ಟಾಂಗವೆರಗುವುದು ಈ ಲೋಕ ಮತ್ತು ಅದರ ಎಲ್ಲ ಸಂಪತ್ತಿಗಿಂತಲೂ ಉತ್ತಮವೆನಿಸುವುದು."

(ವರದಿ: ಹ.ಅಬೂ ಹುರೈರಾ(ರ)- ಬುಖಾರಿ,
ಮುಸ್ಲಿಮ್, ತಿರ್ಮಿದಿ, ಮುಸ್ನದ್ ಅಹ್ಮದ್)

ಈ ಪ್ರವಾದಿ ವಚನದಲ್ಲಿ ಶಿಲುಬೆಯನ್ನು ಕೆಡಹುವುದು ಮತ್ತು ಹಂದಿಯನ್ನು ಕೊಲ್ಲುವುದೆಂದರೆ ಕ್ರೈಸ್ತ ಮತವು ಒಂದು ಪ್ರತ್ಯೇಕ ಧರ್ಮವೆಂಬ ನೆಲೆಯಲ್ಲಿ ತನ್ನ ಅಸ್ತಿತ್ವವನ್ನು ಕಳಕೊಳ್ಳುವುದೆಂದಾಗಿದೆ. ಏಕೆಂದರೆ ಕ್ರೈಸ್ತ ಧರ್ಮದ ಅಸ್ತಿವಾರವೇ "ಅಲ್ಲಾಹನು ತನ್ನ ಏಕೈಕ ಪುತ್ರನಾದ ಈಸಾರನ್ನು(ಅ) ಶಿಲುಬೆಗೇರಿಸಿ 'ಶಾಪ'ದ ಮರಣ ನೀಡುವ ಮೂಲಕ ಅವರನ್ನು ಮನುಷ್ಯರ ಪಾಪಗಳಿಗೆ ಪರಿಹಾರವಾಗಿ ಮಾಡಿದನು" ಎಂಬ ನಂಬಿಕೆಯ ಮೇಲಿದೆ. ಅಲ್ಲಾಹನ ಪ್ರವಾದಿಗಳ ಸಮುದಾಯಗಳ ಪೈಕಿ ಕ್ರೈಸ್ತರ ವೈಶಿಷ್ಟ್ಯವೇನೆಂದರೆ ಅವರು ಕೇವಲ ನಂಬಿಕೆಯೊಂದನ್ನು ಉಳಿಸಿ ಅಲ್ಲಾಹನ ಧರ್ಮದ

ಇತರೆಲ್ಲ ವಿಷಯಗಳನ್ನೂ ಅಳಿಸಿಬಿಟ್ಟರು. ಎಲ್ಲಿಯ ವರೆಗೆಂದರೆ ಎಲ್ಲ ಪ್ರವಾದಿಗಳ ಧರ್ಮಶಾಸ್ತ್ರಗಳಲ್ಲೂ ನಿಷಿದ್ಧವಾಗಿದ್ದಂತಹ ಹಂದಿ ಯನ್ನು ಕೂಡಾ ಅವರು ತಮ್ಮ ಪಾಲಿಗೆ ಧರ್ಮಸಮ್ಮತಗೊಳಿಸಿಕೊಂಡರು.

ಪ್ರಸ್ತುತ ಪ್ರವಾದಿ ವಚನದ ಪ್ರಕಾರ ಈಸಾ(ಅ) ಅವರು ಬಂದು, ತಾನು ಅಲ್ಲಾಹನ ಪುತ್ರನಲ್ಲ, ಶಿಲುಬೆಯಲ್ಲಿ ಪ್ರಾಣಬಿಡಲಿಲ್ಲ ಹಾಗೂ ತಾನು ಮನುಷ್ಯರ ಪಾಪಗಳ ಪ್ರಾಯಶ್ಚಿತ್ತವಾಗಲಿಲ್ಲವೆಂದು ಸಾರುವರು. ಆಗ ಕ್ರೈಸ್ತರ ವಿಶ್ವಾಸಕ್ಕೆ ಯಾವುದೇ ತಳಹದಿ ಉಳಿದಿರಲಾರದು. "ನಾನು ನನ್ನ ಅನುಯಾಯಿಗಳ ಪಾಲಿಗೆ ಹಂದಿಯನ್ನು ಧರ್ಮಬದ್ಧ ಗೊಳಿಸಿರಲಿಲ್ಲ ಅಥವಾ ಅವರನ್ನು ಧರ್ಮಶಾಸ್ತ್ರದ ಅನುಸರಣೆಯಿಂದ ಮುಕ್ತಗೊಳಿಸಿರಲಿಲ್ಲ" ಎಂದು ಈಸಾ(ಅ) ಅವರು ಸಾರಿ ಹೇಳುವಾಗ ಕ್ರೈಸ್ತ ಧರ್ಮದ ಈ ದ್ವಿತೀಯ ವೈಶಿಷ್ಟ್ಯವೂ ಕೊನೆಗೊಳ್ಳುವುದು.

ಪ್ರವಾದಿ ಈಸಾ(ಅ) ಅವರ ಪುನರಾಗಮನದ ಬಳಿಕ ವಿಭಿನ್ನ ಸಮುದಾಯಗಳ ಮಧ್ಯೆ ಇದ್ದಂತಹ ಭಿನ್ನತೆಗಳು ಕೊನೆಗೊಳ್ಳುವುವು. ಎಲ್ಲರೂ ಒಂದೇ ಮುಸ್ಲಿಮ್ ಸಮುದಾಯವಾಗಿ ಮಾರ್ಪಡುವರು. ಆದ್ದರಿಂದ ಅಲ್ಲಿ ಯುದ್ಧವಾಗಲಿ ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳ ಮೇಲೆ ವಿಧಿಸುವಂತಹ ರಕ್ಷಣಾ ಕರವಾದ ಜಿಝಿಯಾ ಆಗಲಿ ಉಳಿಯಲಾರದೆಂದೂ ಈ ಪ್ರವಾದಿ ವಚನದಿಂದ ವ್ಯಕ್ತವಾಗುತ್ತದೆ.

ಇನ್ನೊಂದು ಪ್ರವಾದಿ ವಚನ ಹೀಗಿದೆ:

"ಈಸಾ(ಅ) ಅವರ ಪುನರಾಗಮನದ ತನಕ ಪುನರುತ್ಥಾನದ ಘಳಿಗೆ ಬರಲಾರದು."

**(ವರದಿ: ಅಬೂ ಹುರೈರಾ(ರ) ಬುಖಾರಿ, ಇಬ್ನುಮಾಜಃ)**

"ನಿಮ್ಮ ಮಧ್ಯೆ ಮರ್ಯಮರ ಪುತ್ರ ಇಳಿದು ಬಂದಾಗ ಮತ್ತು ನಿಮ್ಮ ಇಮಾಮ್ ಆಗಲು ನಿಮ್ಮ ಪೈಕಿಯೇ ಒಬ್ಬರಾದಾಗ ನಿಮಗೆ ಹೇಗಾಗಬಹುದು?"

**(ವರದಿ: ಹ.ಅಬೂ ಹುರೈರಾ(ರ)- ಬುಖಾರಿ, ಮುಸ್ಲಿಮ್, ಅಹ್ಮದ್)**

ಅರ್ಥಾತ್ ಪ್ರವಾದಿ ಈಸಾ(ಅ) ಅವರು ನಮಾಝ್‌ನ ನೇತೃತ್ವ ವಹಿಸಲಾರರು. ಬದಲಾಗಿ ಮುಸ್ಲಿಮರಲ್ಲಿರುವ ಇಮಾಮರೇ ಅವರ ನಮಾಝ್‌ನ ನಾಯಕತ್ವ ವಹಿಸುವರು. ಇದರಿಂದ ತಿಳಿದುಬರುವುದೇನೆಂದರೆ ಮರ್ಯಮರ ಪುತ್ರ ಹ.ಈಸಾ(ಅ) ಅವರು ಓರ್ವ ಪ್ರವಾದಿಯೆಂಬ ನೆಲೆಯಲ್ಲಿ ಆಗಮಿಸಿ ಜನತೆಯ ನಾಯಕತ್ವವನ್ನು ವಹಿಸಲಾರರು. ಬದಲಾಗಿ ಅವರು ಅಂತಿಮ ಪ್ರವಾದಿ ಮುಹಮ್ಮದ್(ಸ) ಅವರ ಓರ್ವ ಅನುಯಾಯಿಯಾಗಿ ಆಗಮಿಸುವರು.

ಮತ್ತೊಂದು ಪ್ರವಾದಿ ವಚನದಲ್ಲಿ ಈ ರೀತಿಯಿದೆ:

"ಮರ್ಯಮರ ಪುತ್ರ ಈಸಾ(ಅ) ಅವರು ಇಳಿದು ಬರುವರು. ಅನಂತರ ಅವರು ಹಂದಿಯನ್ನು ಕೊಲ್ಲುವರು ಮತ್ತು ಶಿಲುಬೆಯನ್ನು ಅಳಿಸುವರು. ಅವರಿಗಾಗಿ ನಮಾಝನ್ನು ಜಮ್‌ಅ್ (ಸಂಯುಕ್ತ) ಗೊಳಿಸಲಾಗುವುದು. ಅವರು ಎಷ್ಟು ಸಂಪತ್ತು ವಿತರಿಸುವರೆಂದರೆ

ಅದನ್ನು ಸ್ವೀಕರಿಸಲು ಯಾರೂ ಇರಲಾರರು. ಅವರು ಕಪ್ಪವನ್ನು ಅನೂರ್ಜಿತಗೊಳಿಸುವರು. ರೌಹಾ ಎಂಬಲ್ಲಿ (ಮದೀನಾದಿಂದ 35 ಮೈಲು ದೂರದ ಒಂದು ಪ್ರದೇಶ) ತಂಗಿ ಅಲ್ಲಿಂದ ಅವರು ಹಜ್ಜ್ ಅಥವಾ ಉಮ್ರಾ ಮಾಡುವರು. ಅಥವಾ ಎರಡನ್ನೂ ಸಂಯುಕ್ತವಾಗಿ ನಿರ್ವಹಿಸುವರು- ಈ ಪೈಕಿ ಪ್ರವಾದಿ(ಸ) ಏನು ಹೇಳಿದರೆಂದು ವರದಿಗಾರರಿಗೆ ಸಂಶಯವಿದೆ." (ವರದಿ: ಹ.ಅಬೂ ಹುರೈರಾ(ರ)- ಮುಸ್ನದ್ ಅಹ್ಮದ್)

ಒಂದು ಸಂದರ್ಭದಲ್ಲಿ 'ದಜ್ಜಾಲ್'ನ ಬಂಡಾಯದ ಕುರಿತು ಪ್ರಸ್ತಾವಿಸಿದ ಬಳಿಕ ಪ್ರವಾದಿ(ಸ) ಈ ರೀತಿ ಹೇಳಿದ್ದರು:

"ಆ ಸಂದರ್ಭದಲ್ಲಿ ಮುಸ್ಲಿಮರು ಅವನೊಂದಿಗೆ ಯುದ್ಧಕ್ಕೆ ಸಿದ್ಧತೆ ನಡೆಸುತ್ತಾ ಪಂಕ್ತಿ ಗಳನ್ನು ಕಟ್ಟುತ್ತಿರುವರು- ಮತ್ತು ನಮಾಝ್‌ಗಾಗಿ 'ಇಕಾಮತ್' ಹೇಳಿ ಆಗಿರುವುದು. ಆಗ ಮರ್ಯಮರ ಪುತ್ರ ಈಸಾ(ಅ) ಅವತರಿಸುವರು ಮತ್ತು ನಮಾಝ್‌ನಲ್ಲಿ ಮುಸ್ಲಿಮರ ನೇತೃತ್ವ ವಹಿಸುವರು. ಅಲ್ಲಾಹನ ಶತ್ರು (ದಜ್ಜಾಲನು) ಅವರನ್ನು ಕಂಡ ಕೂಡಲೇ ನೀರಿನಲ್ಲಿ ಉಪ್ಪು ಕರಗುವಂತೆ ಕರಗಿಹೋಗುವನು. ಆತನನ್ನು ಅವನಷ್ಟಕ್ಕೇ ಬಿಟ್ಟರೆ ಅವನು ತಾನಾಗಿಯೇ ಕರಗಿ ಸತ್ತು ಹೋಗುವನು. ಆದರೆ ಅಲ್ಲಾಹನು ಅವನ ಕೊಲೆಯನ್ನು ಈಸಾ(ಅ) ಅವರ ಕೈಯಿಂದಲೇ ಮಾಡಿಸುವನು. ತಮ್ಮ ಈಟಿಯಲ್ಲಿ ಅವನ ರಕ್ತವನ್ನು ಅವರು ಮುಸ್ಲಿಮರಿಗೆ ತೋರಿಸುವರು." (ವರದಿ: ಅಬೂ ಹುರೈರಾ(ರ) ಮಿಷ್ಕಾತ್-ಮುಸ್ಲಿಮ್)

ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿದರು-

"ನನ್ನ ಮತ್ತು ಅವರ (ಅರ್ಥಾತ್ ಈಸಾ(ಅ)) ಮಧ್ಯೆ ಯಾವ ಪ್ರವಾದಿಯೂ ಇಲ್ಲ. ಮತ್ತು ಅವರು ಇಳಿಯುವವರಿದ್ದಾರೆ. ನೀವು ಅವರನ್ನು ಕಂಡಾಗ ಗುರುತಿಸಬೇಕು. ಅವರು ಓರ್ವ ಸಾಮಾನ್ಯ ಎತ್ತರದ ವ್ಯಕ್ತಿ. ಅವರು ಕೆಂಪು ಮಿಶ್ರಿತ ಗೌರ ವರ್ಣದವರಾಗಿದ್ದಾರೆ. ಅವರು ಹಳದಿಬಣ್ಣದ ಎರಡು ವಸ್ತ್ರಗಳನ್ನು ಧರಿಸಿರುವರು. ಅವರ ತಲೆಕೂದಲಿನಿಂದ ನೀರು ತೊಟ್ಟಿಕ್ಕುವಂತಿರುವುದು. ವಸ್ತುತಃ ಅವು ಒದ್ದೆಯಾಗಿರಲಾರವು. ಅವರು ಇಸ್ಲಾಮಿಗಾಗಿ ಜನರೊಂದಿಗೆ ಯುದ್ಧ ಮಾಡುವರು. ಶಿಲುಬೆಯನ್ನು ಧ್ವಂಸ ಮಾಡುವರು. ಹಂದಿಯನ್ನು ಕೊಲ್ಲುವರು. ಜಿಝಿಯಾವನ್ನು (ರಕ್ಷಣಾ ತೆರಿಗೆ) ಕೊನೆಗೊಳಿಸುವರು. ಅವರ ಕಾಲದಲ್ಲಿ ಅಲ್ಲಾಹನು ಇಸ್ಲಾಮಿನ ಹೊರತು ಇತರೆಲ್ಲಾ ಸಮುದಾಯಗಳನ್ನೂ ಅಳಿಸುವನು. ಅವರು ಮಸೀಹ್ ದಜ್ಜಾಲ್‌ನನ್ನು ಸಂಹರಿಸುವರು. ಭೂಮುಖದ ಮೇಲೆ ನಲ್ವತ್ತು ವರ್ಷಗಳ ಕಾಲ ಇರುವರು. ಅನಂತರ ಅವರು ನಿಧನ ಹೊಂದುವರು. ಮುಸ್ಲಿಮರು ಅವರ ಜನಾಝ ನಮಾಝ್ ನೆರವೇರಿಸುವರು."

(ವರದಿ: ಅಬೂ ಹುರೈರಾ(ರ)- ಅಬೂ ದಾವೂದ್, ಮುಸ್ನದ್ ಅಹ್ಮದ್)

"ಅನಂತರ ಈಸಾ ಬಿನ್ ಮರ್ಯಮ್(ಅ) ಅವತರಿಸುವರು. 'ಬನ್ನಿ ತಾವು ನಮಾಝ್ ಮಾಡಿಸಿರಿ ಎಂದು ಮುಸ್ಲಿಮರ ಅಮೀರ್(ನಾಯಕ) ಅವರಲ್ಲಿ ಹೇಳುವರು. ಆದರೆ ಅವರು ಹೇಳುವರು' ಇಲ್ಲ. ನೀವೇ ನಿಮ್ಮ ಅಮೀರ್ ಆಗಿರುವಿರಿ. (ಅರ್ಥಾತ್

ನಿಮ್ಮ ನಾಯಕನು ನಿಮ್ಮಿಂದಲೇ ಆಗಿರಬೇಕು)- ಹೀಗೆ ಅವರು, ಅಲ್ಲಾಹನು ಈ ಸಮುದಾಯಕ್ಕೆ ನೀಡಿರುವ ಗೌರವದ ಕಾರಣದಿಂದ ಹೇಳುವರು."

**(ವರದಿ: ಜಾಬಿರ್ ಬಿನ್ ಅಬ್ದುಲ್ಲಾ(ರ)- ಮುಸ್ಲಿಮ್, ಮುಸ್ನದ್ ಅಹ್ಮದ್)**

ಇನ್ನೊಂದು ಪ್ರವಾದಿ ವಚನದಲ್ಲಿ ಹೀಗಿದೆ:

"ಮರ್ಯಮರ ಪುತ್ರ(ಅ) ದಜ್ಜಾಲನನ್ನು ಉದ್ದ್‌ನ (ಇಸ್ರೇಲ್‌ನ ರಾಜಧಾನಿ ತೆಲ್ ಅವೀವ್‌ನಿಂದ ಕೆಲವು ಮೈಲಿಗಳ ದೂರದಲ್ಲಿರುವ ಒಂದು ಸ್ಥಳ. ಇಲ್ಲಿ ದೊಡ್ಡ ವಿಮಾನ ನಿಲ್ದಾಣವೂ ಇದೆ) ದ್ವಾರದಲ್ಲಿ ವಧಿಸುವರು."

**(ವರದಿ: ಮುಜಮ್ಮಿಲ್ ಬಿನ್ ಜಾರಿಯಃ ಅನ್ಸಾರಿ- ಮುಸ್ನದ್ ಅಹ್ಮದ್)**

## ಪವಿತ್ರಾತ್ಮ ಮತ್ತು ತ್ರಿಏಕತ್ವ

ಕ್ರೈಸ್ತರು ಏಸು ಮತ್ತು ಮರ್ಯಮರ ಜತೆಗೆ ಪವಿತ್ರಾತ್ಮವನ್ನೂ ದೇವರೆಂದು ಸಾರಿ ಅದನ್ನು ಪೂಜಿಸತೊಡಗಿದರು. ಪವಿತ್ರಾತ್ಮದ ಕುರಿತು ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

**''ನಾವು 'ಮೂಸಾ'ರಿಗೆ ಗ್ರಂಥವನ್ನು ಕೊಟ್ಟೆವು. ತರುವಾಯ ನಿರಂತರ ಸಂದೇಶ ವಾಹಕರನ್ನು ಕಳುಹಿಸಿದೆವು. ಕೊನೆಗೆ ವ್ಯಕ್ತವಾದ ದೃಷ್ಟಾಂತಗಳನ್ನು ಕೊಟ್ಟು, 'ಮರ್ಯಮ'ರ ಪುತ್ರ 'ಈಸಾ'ರನ್ನು ಕಳುಹಿಸಿ, ಪವಿತ್ರಾತ್ಮನ ಮೂಲಕ ಅವರಿಗೆ ಸಹಾಯ ನೀಡಿದೆವು.'' (2:87)**

ಇಲ್ಲಿ 'ಪವಿತ್ರಾತ್ಮ' ಎಂದಿರುವುದು ದಿವ್ಯವಾಣಿಯ ಜ್ಞಾನವನ್ನು, ದಿವ್ಯವಾಣಿಯನ್ನು ಪ್ರವಾದಿಗಳ ಬಳಿಗೆ ತರುವ ದೇವಚರ ಜಿಬ್ರೀಲ್‌ರನ್ನು (Gabriel) ಅಥವಾ ಅಲ್ಲಾಹನು ಪಾವನ ಮತ್ತು ಪಾಪ ಮುಕ್ತಗೊಳಿಸಿದ್ದ ಈಸಾ(ಅ) ಅವರ ಆತ್ಮವನ್ನು ಎಂದು ಕುರ್‌ಆನ್ ವ್ಯಾಖ್ಯಾನ ಕಾರರು ಹೇಳಿದ್ದಾರೆ.

ಅಲ್ಲಾಹನು ಈಸಾರಿಗೆ(ಅ) ಪವಿತ್ರವಾದ ಆತ್ಮವನ್ನು ದಯಪಾಲಿಸಿದ್ದನು. ಅದು ಕೆಡುಕುಗಳಿಂದ ಮುಕ್ತವಾಗಿತ್ತು. ಅಡಿಯಿಂದ ಮುಡಿತನಕ ಸತ್ಯಸಂಧವಾಗಿತ್ತು. ನಖಶಿಖಾಂತ ಉನ್ನತ ನೈತಿಕತೆಯನ್ನು ಹೊಂದಿತ್ತು.

ಇದೇ ವಿಷಯವನ್ನು ಪವಿತ್ರ ಕುರ್‌ಆನ್ ಇನ್ನೊಂದೆಡೆ ಈ ರೀತಿ ಹೇಳುತ್ತದೆ:

**''ಓ ಗ್ರಂಥದವರೇ, ನಿಮ್ಮ ಧರ್ಮದಲ್ಲಿ ನೀವು ಹದಮೀರಬೇಡಿರಿ, ಸತ್ಯದ ಹೊರತು ಇನ್ನೇನನ್ನೂ ಅಲ್ಲಾಹನ ಮೇಲೆ ಹೊರಿಸಬೇಡಿರಿ. ಮರ್ಯಮರ ಪುತ್ರ ಈಸಾ ಮಸೀಹರು ಅಲ್ಲಾಹನ ಸಂದೇಶ ವಾಹಕರಾಗಿದ್ದರೇ ವಿನಾ ಇನ್ನೇನೂ ಆಗಿರಲಿಲ್ಲ. ಅವರು, ಅಲ್ಲಾಹನು ಮರ್ಯಮರ ಕಡೆಗೆ ಕಳುಹಿಸಿದ ಒಂದು ಫರಮಾನು (ಆಜ್ಞೆ) ಆಗಿದ್ದರು ಮತ್ತು ಅಲ್ಲಾಹನ ಕಡೆಯಿಂದ (ಮರ್ಯಮರ ಗರ್ಭಾಶಯದಲ್ಲಿ ಶಿಶುವಿನ ರೂಪಧಾರಣ ಮಾಡಿದ) ಒಂದು ಆತ್ಮವಾಗಿದ್ದರು. ಆದುದರಿಂದ ಅಲ್ಲಾಹ್ ಮತ್ತು ಸಂದೇಶ ವಾಹಕರ ಮೇಲೆ ವಿಶ್ವಾಸವಿಡಿರಿ. ಮೂವರಿದ್ದಾರೆನ್ನಬೇಡಿರಿ- ಇದನ್ನು ತೊರೆಯಿರಿ. ಇದು ನಿಮಗೇ ಉತ್ತಮ. ಅಲ್ಲಾಹನಂತೂ**

ಏಕಮಾತ್ರ ಆರಾಧ್ಯನಾಗಿರುವನು. ಅವನಿಗೊಬ್ಬ ಪುತ್ರನಿದ್ದಾನೆನ್ನಲು, ಅವನು ಅದರಿಂದ ಪರಿಶುದ್ಧನಾಗಿರುತ್ತಾನೆ. ಭೂಮಿ-ಆಕಾಶಗಳ ಸಕಲ ವಸ್ತುಗಳೂ ಅವನ ಸೊತ್ತು ಮತ್ತು ಅವುಗಳ ಸಂರಕ್ಷಣೆಗೆ ಅಲ್ಲಾಹನೇ ಸಾಕು." (4:171)

- ತೌರಾತ್, ಇಂಜೀಲ್ ಮತ್ತು ಝಬೂರ್ ಎಂಬ ಗ್ರಂಥಗಳನ್ನು ತಮ್ಮ ಬಳಿಗೆ ಬಂದಿರುವ ದೈವಿಕ ಮಾರ್ಗದರ್ಶನವೆಂದು ನಂಬುವವರನ್ನು ಪವಿತ್ರ ಕುರ್‌ಆನ್ 'ಅಹ್ಲುಲ್ ಕಿತಾಬ್' ಅರ್ಥಾತ್ ಗ್ರಂಥದವರು ಎಂದು ಕರೆಯುತ್ತದೆ. ಇಲ್ಲಿ ಕ್ರೈಸ್ತರನ್ನು ಉದ್ದೇಶಿಸಿ ಈ ವಚನವನ್ನು ಹೇಳಲಾಗಿದೆ.

ಈ ವಾಕ್ಯದಲ್ಲಿ ಕ್ರೈಸ್ತರಿಗೆ ತಮ್ಮ ಧರ್ಮದಲ್ಲಿ ಅತಿರೇಕವೆಸಗದಿರುವಂತೆ ಕರೆ ನೀಡಲಾಗಿದೆ. ಅತಿರೇಕವೆಂದರೆ ಯಾವುದಾದರೂ ಒಂದು ವಸ್ತುವಿನ ಬೆಂಬಲದಲ್ಲಿ ಮಿತಿ ಮೀರುವುದು. ಯಹೂದಿಗಳು ಈಸಾ ಮಸೀಹ್‌ರನ್ನು(ಅ) ನಿರಾಕರಿಸುವಲ್ಲಿ ಹದ ಮೀರಿದ್ದರು ಮತ್ತು ಕ್ರೈಸ್ತರು ಅವರ ಬಗೆಗಿನ ಭಕ್ತಿ, ಶ್ರದ್ಧೆ ಮತ್ತು ಪ್ರೀತಿಯಲ್ಲಿ ಎಲ್ಲೆ ಮೀರಿದ್ದರು. ಕುರ್‌ಆನಿನ ದೃಷ್ಟಿಯಲ್ಲಿ ಇವೆರಡೂ ಅಪರಾಧಗಳಾಗಿದ್ದುವು.

ಇಲ್ಲಿ ಮರ್ಯಮರ ಕಡೆಗೆ ರವಾನಿಸಿದ ವಚನವೆಂದು ಈಸಾರನ್ನು(ಅ) ವರ್ಣಿಸಲಾಗಿದೆ. ಇದರ ತಾತ್ಪರ್ಯವೇನೆಂದರೆ ಅಲ್ಲಾಹನು ಯಾವನೇ ಪುರುಷನ ವೀರ್ಯದ ಹೊರತಾಗಿಯೇ ಗರ್ಭ ಧರಿಸುವಂತೆ ಮರ್ಯಮರ ಗರ್ಭಾಶಯಕ್ಕೆ ಆದೇಶ ನೀಡಿದನು. ಕ್ರೈಸ್ತರಲ್ಲಿಯೂ ಆರಂಭಕಾಲದಲ್ಲಿ ಮಸೀಹ್(ಅ) ಅವರು ತಂದೆಯಿಲ್ಲದೆ ಜನಿಸಿದ ಬಗ್ಗೆ ಇದೇ ನಂಬಿಕೆ ಪ್ರಚಲಿತವಿತ್ತು. ಆದರೆ ಅವರು ಗ್ರೀಕ್ ತತ್ವಶಾಸ್ತ್ರದಿಂದ ಪ್ರಭಾವಿತರಾಗಿ 'ವಚನ'ವನ್ನು 'ವಾಣಿ' ಅಥವಾ 'ನುಡಿ' (Logos) ಎಂದು ಬಗೆದರು. ಅನಂತರ ಅದನ್ನು ಅಲ್ಲಾಹನ ವೈಯಕ್ತಿಕ ವಾಣಿಯೆಂದು ಪರಿಗಣಿಸಿದರು. ತರುವಾಯ ಅಲ್ಲಾಹನ ಆ ವೈಯಕ್ತಿಕ ಗುಣವು (ವಾಣಿ) ಮರ್ಯಮರ(ಅ) ಗರ್ಭಾಶಯದಲ್ಲಿ ಪ್ರವೇಶಿಸಿ ಮಸೀಹ್(ಅ) ಎಂಬ ಶಾರೀರಿಕ ರೂಪಧಾರಣೆ ಮಾಡಿತೆಂದು ನಂಬಿದರು. ಈ ರೀತಿಯಾಗಿ ಪ್ರವಾದಿ ಈಸಾರ(ಅ) ದೇವತ್ವದ ಕಲ್ಪನೆಯು ಕ್ರೈಸ್ತರಲ್ಲಿ ಬೇರೂರಿತು. ಅಲ್ಲಾಹನು ತನ್ನ ವೈಯಕ್ತಿಕ ಗುಣಗಳ ಪೈಕಿ ಮಾತಾಡುವ ಗುಣವನ್ನು ಈಸಾ(ಅ) ಅವರ ರೂಪದಲ್ಲಿ ಪ್ರಕಟಗೊಳಿಸಿದನು ಎಂಬ ಭ್ರಷ್ಟ ನಂಬಿಕೆ ಕ್ರೈಸ್ತರಲ್ಲಿ ವ್ಯಾಪಕವಾಯಿತು.

ಅಲ್ಲಾಹನನ್ನು ಏಕೈಕ ದೇವನೆಂದು ನಂಬುವಂತೆಯೂ ಈಸಾ(ಅ) ಅವರ ಸಹಿತ ಅಲ್ಲಾಹನ ಎಲ್ಲ ಪ್ರವಾದಿಗಳ ಮೇಲೆ ವಿಶ್ವಾಸವಿರಿಸುವಂತೆಯೂ ಈ ಕುರ್‌ಆನ್ ವಾಕ್ಯದಲ್ಲಿ ಕ್ರೈಸ್ತರಿಗೆ ಕರೆ ನೀಡಲಾಗಿದೆ. ಇದುವೇ ಈಸಾ(ಅ) ಅವರ ಮೂಲ ಶಿಕ್ಷಣವಾಗಿತ್ತು ಮತ್ತು ಇದುವೇ ಸತ್ಯವಾಗಿದೆ. ಆದ್ದರಿಂದ ಈಸಾ(ಅ) ಅವರ ನೈಜ ಅನುಯಾಯಿಗಳೆಲ್ಲರೂ ಇದನ್ನೇ ನಂಬಬೇಕು ಎಂದು ಅದು ಕರೆ ನೀಡುತ್ತದೆ.

ಕ್ರೈಸ್ತರು ಒಂದೇ ಸಮಯದಲ್ಲಿ ಏಕದೇವತ್ವವನ್ನೂ ತ್ರಿಏಕತ್ವವನ್ನೂ ನಂಬುತ್ತಾರೆ. ಬೈಬಲ್‌ನಲ್ಲಿ ಬರುವ ಈಸಾ(ಅ) ಅವರ ಸ್ಪಷ್ಟ ನುಡಿಗಳಂತೆ ದೇವನಂತೂ ಒಬ್ಬನೇ

ದೇವನಾಗಿದ್ದಾನೆ. ಅವನ ಹೊರತು ಅನ್ಯ ದೇವರಿಲ್ಲವೆಂಬ ವಾಸ್ತವಿಕತೆಯನ್ನು ಯಾವ ಕ್ರೈಸ್ತನಿಂದಲೂ ನಿರಾಕರಿಸಲು ಸಾಧ್ಯವಿಲ್ಲ. ಆದ್ದರಿಂದ ಏಕದೇವತ್ವವೇ ಮೂಲಧರ್ಮವೆಂದು ಅವರು ಒಪ್ಪಲೇಬೇಕಾಗುತ್ತದೆ. ಆದರೆ ಆರಂಭದಲ್ಲಿ ಅವರಿಗಾದ ಒಂದು ತಪ್ಪು ಕಲ್ಪನೆಯ ಕಾರಣದಿಂದಾಗಿ ಅಲ್ಲಾಹನು ಮಸೀಹ್‌ರ ರೂಪದಲ್ಲಿ ಅವತರಿಸಿದನು. ಅಲ್ಲಾಹನ ಆತ್ಮವು ಅದರಲ್ಲಿ ಸಂಭೂತವಾಯಿತು. ಆದ್ದರಿಂದ ಅವರು ಮಸೀಹ್‌ರನ್ನೂ(ಅ) ಪವಿತ್ರಾತ್ಮನನ್ನೂ, ಅಲ್ಲಾಹನ ದೇವತ್ವದ ಜತೆ ದೇವರೆಂದು ಪರಿಗಣಿಸುವುದನ್ನು ತಮ್ಮ ಮೇಲೆ ಕಡ್ಡಾಯಗೊಳಿಸಿಕೊಂಡರು. ಈ ಸ್ವಯಂಕೃತ ಕಲ್ಪನೆಯಿಂದಾಗಿ ಏಕದೇವತ್ವದ ಜತೆ ತ್ರಿಏಕತ್ವವನ್ನು ಮತ್ತು ತ್ರಿಏಕತ್ವದ ಜತೆ ಏಕದೇವತ್ವವನ್ನು ಸಮನ್ವಯಗೊಳಿಸುವುದು ಅವರ ಪಾಲಿಗೆ ಒಂದು ಬಿಡಿಸಲಾಗದ ಕಗ್ಗಂಟಾಗಿ ಮಾರ್ಪಟ್ಟಿತು. ಕಳೆದ 20 ಶತಮಾನಗಳಿಂದ ಕ್ರೈಸ್ತ ವಿದ್ವಾಂಸರು ಈ ಕಗ್ಗಂಟನ್ನು ಬಿಡಿಸುವ ಪ್ರಯತ್ನದಲ್ಲಿ ನಿರತರಾಗಿದ್ದಾರೆ. ಇದರ ವಿವಿಧ ವ್ಯಾಖ್ಯಾನಗಳ ಆಧಾರದಲ್ಲಿ ಅವರಲ್ಲಿ ಹತ್ತಾರು ಪಂಗಡಗಳು ಜನ್ಮತಾಳಿದುವು. ಇದೇ ಆಧಾರದಲ್ಲಿ ಅವರು ಪರಸ್ಪರರನ್ನು ಹೀಡನ್ (ಕಾಫಿರ್) ಎಂದು ಸಾರಿದರು. ಇದೇ ಜಗಳದಲ್ಲಿ ಬೇರೆ ಬೇರೆ ಚರ್ಚ್‌ಗಳು ಅಸ್ತಿತ್ವಕ್ಕೆ ಬಂದುವು. ಅವರ ವೇದಾಂತವೆಲ್ಲಾ ಇದರ ಕಡೆಗೇ ಹೆಚ್ಚು ಒತ್ತು ಕೊಡುತ್ತದೆ.

ಕ್ರೈಸ್ತರನ್ನು ಈ ಗೊಂದಲಕ್ಕೆ ಸಿಲುಕಿಸಿದ್ದು ದೇವನಾಗಲಿ ಅವನ ಪ್ರವಾದಿಯಾದ ಈಸಾ(ಅ) ಆಗಲೀ ಆಗಿರಲಿಲ್ಲ. ಮೂವರು ದೇವರನ್ನು ನಂಬುತ್ತಾ ಏಕದೇವತ್ವ ಸಿದ್ಧಾಂತವನ್ನು ಹೇಗೆ ಸಮರ್ಥಿಸುವುದು ಎಂಬ ಈ ಗೊಂದಲಕ್ಕೆ ಯಾವ ಪರಿಹಾರವೂ ಸಾಧ್ಯವಲ್ಲ. ಈ ಗೊಂದಲವನ್ನು ನಿರ್ಮಿಸಿರುವುದು ಅವರ ಅತಿರೇಕವಾಗಿದೆ. ಆ ಅತಿರೇಕವನ್ನು ತೊರೆಯುವುದೊಂದೇ ಅದಕ್ಕಿರುವ ಪರಿಹಾರವಾಗಿದೆ. ಈಸಾ(ಅ) ಮತ್ತು ಪವಿತ್ರಾತ್ಮನ ದೇವತ್ವ ಕಲ್ಪನೆಯನ್ನು ತೊರೆದು ಕೇವಲ ಅಲ್ಲಾಹನನ್ನು ಏಕೈಕ ದೇವನೆಂದು ಅಂಗೀಕರಿಸುವುದು ಮತ್ತು ಈಸಾ(ಅ) ಅವರನ್ನು ದೇವತ್ವದಲ್ಲಿ ಸಹಭಾಗಿಯೆಂದು ಪರಿಗಣಿಸದೆ ಆತನ ಸಂದೇಶವಾಹಕ, ಪ್ರವಾದಿಯೆಂದು ನಂಬುವುದೊಂದೇ ಇದಕ್ಕಿರುವ ಪರಿಹಾರ ಮಾರ್ಗ.

## ಈಸಾರ(ಅ) ಧರ್ಮ

ಪ್ರವಾದಿ ಈಸಾ(ಅ) ಅವರು ಒಂದು ಹೊಸ ಧರ್ಮದ ಸ್ಥಾಪಕರಾಗಿರಲಿಲ್ಲ. ಅವರು ಕೂಡಾ ಇತರೆಲ್ಲ ಪ್ರವಾದಿಗಳಂತೆ ಅಲ್ಲಾಹನ ಸನಾತನ ಧರ್ಮವನ್ನೇ ಬೋಧಿಸಿದ್ದರು. ಅವರು ಹಿಂದಿನ ಪ್ರವಾದಿಗಳ ಶಿಕ್ಷಣವನ್ನು ಅಳಿಸಿ ಒಂದು ಹೊಸ ಧರ್ಮದ ಶಿಕ್ಷಣವನ್ನು ಬೋಧಿಸಲು ಬಂದವರಾಗಿರಲಿಲ್ಲ. ಬದಲಾಗಿ ತಮಗಿಂತ ಮುಂಚೆ ಬಂದ ಮೂಸಾ(ಅ) ಅವರ ಧರ್ಮವನ್ನು ಸಮರ್ಥಿಸಲಿಕ್ಕಾಗಿ ಬಂದವರು ಎಂಬುದನ್ನು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ಪ್ರತಿಪಾದಿಸಿದೆ.

"ನಾನು ತೌರಾತಿನಲ್ಲಿರುವುದರ ಪೈಕಿ ಇದೀಗ ನನ್ನ ಕಾಲದಲ್ಲಿರುವ ಶಿಕ್ಷಣ ಮತ್ತು ಸನ್ಮಾರ್ಗದರ್ಶನವನ್ನು ದೃಢೀಕರಿಸುವವನಾಗಿ ಬಂದಿರುತ್ತೇನೆ ಮತ್ತು ನಿಮಗಾಗಿ ನಿಷಿದ್ಧಗೊಳಿಸಲ್ಪಟ್ಟಿರುವ ಕೆಲವು ವಸ್ತುಗಳನ್ನು ಧರ್ಮಸಮ್ಮತಗೊಳಿಸಲಿಕ್ಕಾಗಿ ನಾನು ಬಂದಿರುತ್ತೇನೆ. ನೋಡಿರಿ, ನಾನು ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಕುರುಹನ್ನು ತೆಗೆದುಕೊಂಡು ಬಂದಿರುತ್ತೇನೆ. ಆದುದರಿಂದ ಅಲ್ಲಾಹನನ್ನೂ ಭಯಪಡಿರಿ ಮತ್ತು ನನ್ನ ಅನುಸರಣೆ ಮಾಡಿರಿ." (3:50)

ಅರ್ಥಾತ್ ನಿಮ್ಮ ಅಜ್ಞಾನಿಗಳ ಮೂಢನಂಬಿಕೆಗಳು, ನಿಮ್ಮ ಧರ್ಮಶಾಸ್ತ್ರಜ್ಞರ ಕಾನೂನಿನ ಕೂದಲು ಸೀಳುವಿಕೆಯ ಕೆಲಸಗಳು, ನಿಮ್ಮ ವೈರಾಗಿಗಳ ಅತಿರೇಕಗಳು ಮತ್ತು ದೇವೇತರ ಆಡಳಿತ ವ್ಯವಸ್ಥೆಯ ಪ್ರಭಾವದಿಂದ ನಿಮ್ಮಲ್ಲಿ ಬಂದು ಬಿಟ್ಟಿರುವ ಕಟ್ಟು-ಕಟ್ಟಳೆಗಳನ್ನು ನಾನು ರದ್ದುಗೊಳಿಸಲಿಕ್ಕೆ ಬಂದಿರುವೆನು. ಅಲ್ಲಾಹನು ಯಾವುದನ್ನು ನಿಮಗೆ ಧರ್ಮಸಮ್ಮತಗೊಳಿಸಿರುವನೋ ಅದನ್ನು ಧರ್ಮಸಮ್ಮತವೆಂದು ಸಾರಲು ಮತ್ತು ಯಾವುದನ್ನು ನಿಷಿದ್ಧವೆಂದು ಘೋಷಿಸಿರುವನೋ ಅದನ್ನು ನಿಷಿದ್ಧಗೊಳಿಸಲು ಬಂದಿರುವೆನು. ಇದು ನನ್ನ ರಾಯಭಾರವಾಗಿದೆಯೇ ಹೊರತು ನಾನು ಒಂದು ಹೊಸ ಧರ್ಮವನ್ನು ಆವಿಷ್ಕರಿಸಲಿಕ್ಕಾಗಿ ಬಂದವನಲ್ಲ.

ಮೂಸಾ(ಅ) ಅವರು ಯಾವ ಧರ್ಮವನ್ನು ತಂದಿದ್ದರೋ ಅದೇ ಧರ್ಮವನ್ನು ಈಸಾ(ಅ) ಅವರು ಕೂಡಾ ತಂದಿದ್ದರೆಂಬ ಬಗ್ಗೆ ಪ್ರಸಕ್ತ ಬೈಬಲ್‌ನಲ್ಲಿಯೂ ಸ್ಪಷ್ಟ ಸೂಚನೆಗಳಿವೆ. ಉದಾಹರಣೆಗಾಗಿ ಮತ್ತಾಯನು ಬರೆದ ಸುವಾರ್ತೆಯಲ್ಲಿ ಈಸಾ(ಅ) ಅವರು ಪರ್ವತದ ಪ್ರವಚನದ ವೇಳೆ ಹೀಗೆ ಹೇಳಿರುವರೆಂದಿದೆ:

"ಮೋಶೆಯ ಧರ್ಮಶಾಸ್ತ್ರವನ್ನಾಗಲಿ ಪ್ರವಾದಿಗಳ ವಚನಗಳನ್ನಾಗಲಿ ತೆಗೆದು ಹಾಕುವುದಕ್ಕೆ ನಾನು ಬಂದೆನೆಂದು ನೆನಸಬೇಡಿರಿ. ತೆಗೆದು ಹಾಕುವುದಕ್ಕೆ ಬಂದಿಲ್ಲ. ನೆರವೇರಿಸುವುದಕ್ಕೆ ಬಂದಿದ್ದೇನೆ." (ಮತ್ತಾಯನ ಸುವಾರ್ತೆ, 5:17)

ಓರ್ವ ಯಹೂದಿ ವಿದ್ವಾಂಸರು ಪ್ರವಾದಿ ಈಸಾ(ಅ) ಅವರಲ್ಲಿ ಧರ್ಮದ ಆದೇಶಗಳ ಪೈಕಿ ಪ್ರಪ್ರಥಮ ಆದೇಶ ಯಾವುದು ಎಂದು ವಿಚಾರಿಸಿದಾಗ ಅವರು ಈ ರೀತಿ ಉತ್ತರಿಸಿದರು:

"ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣ ಹೃದಯದಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸಬೇಕು ಎಂಬ ಆಜ್ಞೆಯೇ ಮುಖ್ಯವಾದದ್ದು ಮತ್ತು ಮೊದಲನೆಯದು. ಇದಕ್ಕೆ ಸಮಾನವಾದ ಎರಡನೆಯ ಆಜ್ಞೆ ಒಂದು ಉಂಟು. ಅದು ಯಾವುದೆಂದರೆ- ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸಬೇಕು ಎಂಬುದೇ. ಈ ಎರಡು ಆಜ್ಞೆಗಳು ಎಲ್ಲಾ ಧರ್ಮಶಾಸ್ತ್ರಕ್ಕೂ ಪ್ರವಾದಿಗಳ ಗ್ರಂಥಕ್ಕೂ ಆಧಾರವಾಗಿದೆ." (ಮತ್ತಾಯನ ಸುವಾರ್ತೆ, 22:37-40)

ಈಸಾ(ಅ) ತಮ್ಮ ಶಿಷ್ಯರಿಗೆ ಈ ರೀತಿ ಹೇಳುತ್ತಾರೆ:

"ಶಾಸ್ತ್ರಿಗಳೂ ಫರಿಸಾಯರೂ ಮೋಶೆಯ ಪೀಠದಲ್ಲಿ ಕುಳಿತು ಕೊಂಡಿದ್ದಾರೆ. ಆದುದರಿಂದ ಅವರು ನಿಮಗೆ ಏನೇನು ಹೇಳುತ್ತಾರೋ ಅದನ್ನೆಲ್ಲಾ ಮಾಡಿರಿ. ಕಾಪಾಡಿಕೊಳ್ಳಿರಿ.

ಆದರೆ ಅವರ ನಡೆಯ ಪ್ರಕಾರ ನಡೆಯಬೇಡಿರಿ. ಅವರು ಹೇಳುತ್ತಾರೆಯೇ ಹೊರತು ನಡೆಯುವುದಿಲ್ಲ." **(ಮತ್ತಾಯನ ಸುವಾರ್ತೆ, 23:2-3)**

ಈ ಹಿಂದೆ ಉದ್ಧರಿಸಿರುವ ಕುರ್‌ಆನ್ ವಚನದ ನಂತರವೇ ಬಂದಿರುವ ವಚನದಲ್ಲಿ ಪ್ರವಾದಿ ಈಸಾ(ಅ) ಅವರ ಮುಖ್ಯ ಬೋಧನೆಯನ್ನು ಪವಿತ್ರ ಕುರ್‌ಆನ್ ಈ ರೀತಿ ಉಲ್ಲೇಖಿಸುತ್ತದೆ:

**"ಅಲ್ಲಾಹ್ ನನ್ನ ಪ್ರಭುವೂ ಆಗಿರುತ್ತಾನೆ ನಿಮ್ಮ ಪ್ರಭುವೂ ಆಗಿರುತ್ತಾನೆ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ. ಇದೇ ನೇರಮಾರ್ಗವಾಗಿದೆ." (3:51)**

ಇದರಿಂದ ತಿಳಿದು ಬರುವುದೇನೆಂದರೆ ಎಲ್ಲ ಪ್ರವಾದಿಗಳಂತೆ ಪ್ರವಾದಿ ಈಸಾ(ಅ) ಅವರ ಸಂದೇಶದ ಮುಖ್ಯಾಂಶಗಳು ಮೂರಾಗಿದ್ದುವು:

1. ಅಲ್ಲಾಹನೇ ನೈಜ ಅಧಿಪತಿ ಮತ್ತು ಸಾರ್ವಭೌಮನೆಂಬುದನ್ನು ಒಪ್ಪಿಕೊಂಡು ಅವನ ದಾಸ್ಯ-ಆರಾಧನೆ ಮತ್ತು ಅನುಸರಣೆ ಮಾಡುವುದು. ಅವನ ಅನುಸರಣೆಯ ಮೇಲೆಯೇ ನೈತಿಕ ಮತ್ತು ನಾಗರಿಕ ವ್ಯವಸ್ಥೆಯನ್ನು ಸ್ಥಾಪಿಸುವುದು.

2. ಆ ನೈಜ ಅಧಿಪತಿಯ ಪ್ರತಿನಿಧಿಯೆಂಬ ನೆಲೆಯಲ್ಲಿ ಪ್ರವಾದಿಯ ಆಜ್ಞೆಗಳನ್ನು ಅನುಸರಿಸುವುದು.

3. ಮಾನವ ಜೀವನಕ್ಕೆ ಧರ್ಮಸಮ್ಮತ-ನಿಷಿದ್ಧ, ಸರಿ-ತಪ್ಪು ಎಂಬ ನಿಬಂಧನೆಗಳು ಅಲ್ಲಾಹನದೇ ಆಗಿರಬೇಕು. ಇತರರ ನಿಯಮಗಳನ್ನು ರದ್ದುಗೊಳಿಸಬೇಕು.

ಇದರಿಂದ ವ್ಯಕ್ತವಾಗುವ ಇನ್ನೊಂದು ಅಂಶವೇನೆಂದರೆ ವಾಸ್ತವದಲ್ಲಿ ಈಸಾ, ಮೂಸಾ(ಅ), ಮುಹಮ್ಮದ್(ಸ) ಮತ್ತು ಇತರ ಪ್ರವಾದಿಗಳ ಜೀವನ ಧ್ಯೇಯದಲ್ಲಿ ಸ್ವಲ್ಪವೂ ವ್ಯತ್ಯಾಸವಿರಲಿಲ್ಲ. ಬೇರೆ ಬೇರೆ ಪ್ರವಾದಿಗಳ ಧ್ಯೇಯ ಭಿನ್ನಭಿನ್ನವಾಗಿತ್ತೆಂದು ಹೇಳುವವರು ದೊಡ್ಡ ತಪ್ಪು ಮಾಡಿದ್ದಾರೆ. ಜಗದೊಡೆಯನ ವತಿಯಿಂದ ಅವನ ಪ್ರಜೆಗಳ ಕಡೆಗೆ ನಿಯುಕ್ತರಾಗಿ ಬಂದವರೆಲ್ಲರ ಧ್ಯೇಯವು ಪ್ರಜೆಗಳನ್ನು ಅವಿಧೇಯತೆ, ಸ್ವಚ್ಛಂದತೆ ಮತ್ತು ಬಂಡಾಯ ನೀತಿಯಿಂದ ತಡೆಯುವುದೇ ಆಗಿರಬೇಕು.

ಪ್ರಸಕ್ತ ಬೈಬಲ್‌ನಲ್ಲಿಯೂ ಈ ಮೂರು ಅಂಶಗಳ ಕಡೆಗೆ ಸೂಚನೆಗಳು ಲಭಿಸುತ್ತವೆ. ಉದಾಹರಣೆಗೆ ಈಸಾ(ಅ) ಕೇವಲ ಏಕದೇವನ ದಾಸ್ಯ-ಆರಾಧನೆಯ ಕರೆ ನೀಡಿದ್ದರೆಂಬುದನ್ನು ಈ ಮಾತು ಸೂಚಿಸುತ್ತದೆ:

"ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡಬಿದ್ದು ಆತನೊಬ್ಬನನ್ನೇ ಆರಾಧಿಸಬೇಕು." **(ಮತ್ತಾಯನ ಸುವಾರ್ತೆ, 4:10)**

ಆಕಾಶಗಳಲ್ಲಿ ಅಲ್ಲಾಹನ ಆದೇಶಗಳು ಜಾರಿಗೊಳ್ಳುವಂತೆ ಭೂಮಿಯ ಮೇಲೂ ಅಲ್ಲಾಹನ ಧರ್ಮದ ಆದೇಶಗಳು ಜಾರಿಗೊಳ್ಳಬೇಕೆಂಬುದೇ ಅವರ ಎಲ್ಲ ಪ್ರಯತ್ನಗಳ ಉದ್ದೇಶವಾಗಿತ್ತು.

"ನಿನ್ನ ರಾಜ್ಯವು ಬರಲಿ. ನಿನ್ನ ಚಿತ್ತವು ಆಕಾಶ ಲೋಕದಲ್ಲಿ ನೆರವೇರುವಂತೆ ಭೂಲೋಕದಲ್ಲೂ ನೆರವೇರಲಿ." **(ಮತ್ತಾಯನ ಸುವಾರ್ತೆ, 6:10)**

ಈಸಾ(ಅ) ತಮ್ಮನ್ನು ಅಲ್ಲಾಹನ ಪ್ರವಾದಿ ಮತ್ತು ಆಕಾಶಲೋಕಗಳ ರಾಜನ ಪ್ರತಿನಿಧಿಯೆಂಬ ನೆಲೆಯಲ್ಲಿ ಪ್ರಸ್ತುತಪಡಿಸುತ್ತಿದ್ದರು. ಆ ನೆಲೆಯಲ್ಲಿಯೇ ಜನರು ತನ್ನನ್ನು ಅನುಸರಿಸಬೇಕೆಂದು ಕರೆ ನೀಡುತ್ತಿದ್ದರು. ಈ ವಿಷಯ ಅವರ ಅನೇಕ ವಚನಗಳಿಂದ ವ್ಯಕ್ತವಾಗುತ್ತದೆ: ಅವರು ತಮ್ಮ ಊರಾದ ನಾಸಿರಾದಿಂದ ಧರ್ಮಪ್ರಚಾರ ಕಾರ್ಯವನ್ನು ಆರಂಭಿಸಿದಾಗ ಅವರ ಸ್ವಂತ ಬಂಧು ಮಿತ್ರರು ಅದರ ವಿರುದ್ಧ ಎದ್ದುನಿಂತರು. ಆಗ ಅವರು ಹೀಗೆ ಹೇಳಿದರೆಂದು ಮತ್ತಾಯ, ಮಾರ್ಕ ಮತ್ತು ಲೂಕನ ಸುವಾರ್ತೆಗಳಲ್ಲಿ ಬಂದಿದೆ:

"ಪ್ರವಾದಿಯು ತನ್ನ ಊರಿನಲ್ಲಿ ಜನಪ್ರಿಯನಾಗುವುದಿಲ್ಲ. ಜೆರೂಸಲೇಮ್‌ಸಲ್ಲಿ ಈಸಾ(ಅ) ಅವರ ಕೊಲೆಯ ಸಂಚು ನಡೆದು ಜನರು ಅವರಿಗೆ ಊರು ಬಿಟ್ಟು ಹೋಗುವಂತೆ ಸೂಚಿಸಿದಾಗ ಅವರು ಈ ರೀತಿ ಉತ್ತರಿಸಿದ್ದರು: ಪ್ರವಾದಿಯು ಜೆರೂಸಲೇಮ್‌ನ ಹೊರಗೆ ವಧಿಸಲ್ಪಡುವುದು ಅಸಂಭವ." **(ಲೂಕನ ಸುವಾರ್ತೆ, 13:23)**

"ಕೊನೆಯ ಬಾರಿ ಅವರು ಜೆರೂಸಲೇಮ್‌ಗೆ ಪ್ರವೇಶಿಸುತ್ತಿದ್ದಾಗ ಅವರ ಶಿಷ್ಯರು ದೊಡ್ಡ ಸ್ವರದಲ್ಲಿ ಹೀಗೆ ಹೇಳಲಾರಂಭಿಸಿದರು- 'ಕರ್ತನ ಹೆಸರಿನಲ್ಲಿ ಬರುವ ಅರಸನಿಗೆ ಆಶೀರ್ವಾದ, ಪರಲೋಕದಲ್ಲಿ ಮಂಗಳ, ಮೇಲಣಲೋಕಗಳಲ್ಲಿ ಮಹಿಮೆ. ಜನರ ಗುಂಪಿನೊಳಗಿದ್ದ ಫರಿಸಾಯರಲ್ಲಿ ಕೆಲವರು ಆತನಿಗೆ - ಬೋಧಕನೇ, ನಿನ್ನ ಶಿಷ್ಯರನ್ನು ಗದರಿಸು ಎಂದು ಹೇಳಿದ್ದಕ್ಕೆ ಆತನು- ಇವರು ಸುಮ್ಮನಾದರೆ ಈ ಕಲ್ಲುಗಳೇ ಕೂಗುವವು ಎಂದು ನಿಮಗೆ ಹೇಳುತ್ತೇನೆ ಅಂದನು." **(ಲೂಕನ ಸುವಾರ್ತೆ: 19: 38-40)**

ಒಂದು ಸಂದರ್ಭದಲ್ಲಿ ಅವರು ಹೀಗೆ ಹೇಳಿದ್ದರು:

"ಎಲ್ಲೈ ಕಷ್ಟಪಡುವವರೇ! ಹೊರೆ ಹೊತ್ತವರೇ! ನೀವೆಲ್ಲರೂ ನನ್ನ ಬಳಿಗೆ ಬನ್ನಿ. ನಾನು ನಿಮಗೆ ವಿಶ್ರಾಂತಿ ಕೊಡುವೆನು. ನಾನು ಸಾತ್ವಿಕನೂ ದೀನ ಮನಸ್ಸುಳ್ಳವನೂ ಆಗಿರುವುದರಿಂದ ನನ್ನ ನೊಗವನ್ನು ನಿಮ್ಮ ಮೇಲೆ ತೆಗೆದುಕೊಂಡು ನನ್ನಲ್ಲಿ ಕುಳಿತುಕೊಳ್ಳಿರಿ. ಆಗ ನಿಮ್ಮ ಆತ್ಮಗಳಿಗೆ ವಿಶ್ರಾಂತಿ ಸಿಗುವುದು. ಏಕೆಂದರೆ ನನ್ನ ನೊಗವು ಮೃದುವಾದದ್ದು ಮತ್ತು ನನ್ನ ಹೊರೆಯು ಹಗುರವಾದುದು." **(ಮತ್ತಾಯನ ಸುವಾರ್ತೆ, 11:28-30)**

"ಇನ್ನು ಈಸಾ(ಅ) ಅವರು ಮಾನವ ನಿರ್ಮಿತ ಕಾನೂನಿನ ಬದಲು ದೇವ ನಿಯಮಗಳ ಅನುಸರಣೆ ಮಾಡಿಸಬಯಸುತ್ತಿದ್ದರು ಎಂಬ ವಿಚಾರ. ಅದು ಮತ್ತಾಯ ಮತ್ತು ಮಾರ್ಕನ ಸುವಾರ್ತೆಗಳಿಂದ ಸ್ಪಷ್ಟವಾಗುತ್ತದೆ. ಅದರ ಸಾರಾಂಶವೇನೆಂದರೆ ಯಹೂದಿ ವಿದ್ವಾಂಸರು ಈಸಾ(ಅ) ಅವರ ಶಿಷ್ಯರ ಬಗ್ಗೆ ಅವರು ಹಿರಿಯರ ಸಂಪ್ರದಾಯಕ್ಕೆ ವಿರುದ್ಧವಾಗಿ ಕೈತೊಳೆಯದೆ ಊಟ ಮಾಡುತ್ತಾರೆಂದು ಆಕ್ಷೇಪಿಸುತ್ತಿದ್ದರು. ಆಗ ಈಸಾ(ಅ) ಹೇಳಿದರು- ಡಾಂಬಿಕರಾದ ನಿಮ್ಮ ಅವಸ್ಥೆಯು ಪ್ರವಾದಿ ಯೆಶಾಯ ಅವರು ಲೇವಡಿ ಮಾಡಿದಂತೆಯೇ ಇದೆ- ಈ ಸಮುದಾಯ ಬಾಯಿಯಿಂದ ನನ್ನನ್ನು ಗೌರವಿಸುತ್ತದೆ. ಆದರೆ ಅವರ ಮನಸ್ಸು ನನ್ನಿಂದ ದೂರವಾಗಿದೆ. ಏಕೆಂದರೆ ಇವರು ಮಾನವ ನಿರ್ಮಿತ ನಿಯಮಗಳನ್ನು ಬೋಧಿಸುತ್ತಾರೆ. ನೀವು ದೇವರ ಆದೇಶವನ್ನು ಅಲ್ಲಗಳೆಯುತ್ತೀರಿ ಮತ್ತು ನೀವೇ

ರಚಿಸಿಕೊಂಡ ನಿಯಮಗಳನ್ನು ಪಾಲಿಸುತ್ತೀರಿ. ದೇವರು ತೌರಾತ್‌ನಲ್ಲಿ ಆಜ್ಞೆ ನೀಡಿದ್ದನು. ತಂದೆ-ತಾಯಿಗಳನ್ನು ಗೌರವಿಸಿರಿ. ಯಾರು ತಂದೆ ತಾಯಿಗಳನ್ನು ಬಯ್ಯುತ್ತಾನೋ ಅವನನ್ನು ವಧಿಸಬೇಕು. ಆದರೆ ನೀವು ಹೇಳುತ್ತೀರಿ - ಯಾವನು ತನ್ನ ತಂದೆ ತಾಯಿಗಳಿಗೆ "ನಾನು ನಿಮಗೆ ಮಾಡಬೇಕಾದ ಸೇವೆಯನ್ನು ದೇವರಿಗೆ ಅರ್ಪಿಸಿರುವೆನು" ಎಂದು ಹೇಳುತ್ತಾನೋ ಅವನ ಪಾಲಿಗೆ ತಂದೆ-ತಾಯಿಗಳ ಸೇವೆ ಮಾಡದಿರುವುದು ಧರ್ಮಬದ್ಧವಾಗಿದೆ."

**(ಮತ್ತಾಯನ ಸುವಾರ್ತೆ, 15:3-9; ಮಾರ್ಕನ ಸುವಾರ್ತೆ, 7:5-13)**

## ಕ್ರೈಸ್ತರ ಕಲ್ಪನೆಯ ಈಸಾ(ಅ)

ಪ್ರವಾದಿ ಈಸಾ(ಅ) ಅವರ ಆರಂಭ ಕಾಲದ ಅನುಯಾಯಿಗಳು ಅವರ ಕುರಿತು ಸರಿಯಾದ ವಿಶ್ವಾಸವನ್ನೇ ಇರಿಸಿದ್ದರು. ಅದರ ಶಿಕ್ಷಣವನ್ನೇ ಈಸಾ(ಅ) ಅವರು ಅವರಿಗೆ ನೀಡಿದ್ದರು. ಆದರೆ ಅನಂತರದ ಕ್ರೈಸ್ತರು ಅವರ ಶ್ರದ್ಧೆ ಮತ್ತು ಭಕ್ತಿಯಲ್ಲಿ ಮಿತಿಮೀರಿದರು. ತಮ್ಮ ನೆರೆಹೊರೆಯಲ್ಲಿರುವ ಜನಾಂಗಗಳ ಮೂಢನಂಬಿಕೆ, ಕಂದಾಚಾರ ಮತ್ತು ತತ್ವಶಾಸ್ತ್ರಗಳಿಂದ ಪ್ರಭಾವಿತರಾಗಿ ತಮ್ಮ ವಿಶ್ವಾಸವನ್ನು ತಾತ್ವಿಕ ವ್ಯಾಖ್ಯಾನಗಳಿಗೆ ಗುರಿಪಡಿಸಿ ಒಂದು ಹೊಸ ಧರ್ಮವನ್ನು ಆವಿಷ್ಕರಿಸಿದರು. ಅದಕ್ಕೂ ಪ್ರವಾದಿ ಈಸಾರ(ಅ) ಮೂಲ ಬೋಧನೆಗಳಿಗೂ ದೂರದ ನಂಟೂ ಉಳಿಯಲಿಲ್ಲ. ಈ ಬಗ್ಗೆ ಓರ್ವ ಪ್ರಖ್ಯಾತ ಧರ್ಮಶಾಸ್ತ್ರ ವಿದ್ವಾಂಸರಾದ ರೆವರೆಂಡ್ ಚಾರ್ಲ್ಸ್ ಎಂಡರ್‌ಸನ್ ಸ್ಕಾಟ್ ಅವರ ಹೇಳಿಕೆಯು ಉಲ್ಲೇಖನೀಯವಾಗಿದೆ. ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ 14ನೆಯ ಆವೃತ್ತಿಯ ಯೇಸುಕ್ರಿಸ್ತ ಎಂಬ ಅಧ್ಯಾಯದಲ್ಲಿ ಅವರ ಸುದೀರ್ಘ ಹೇಳಿಕೆಯನ್ನು ಹೀಗೆ ಉದ್ಧರಿಸಲಾಗಿದೆ:

"ಪ್ರಥಮ ಮೂರು ಸುವಾರ್ತೆಗಳಲ್ಲಿ (ಮತ್ತಾಯ, ಮಾರ್ಕ, ಲೂಕ) ಅವುಗಳನ್ನು ಬರೆದವರು ಯೇಸುವನ್ನು ಮನುಷ್ಯನ ಹೊರತಾದ ಬೇರೇನೋ ಆಗಿರುವರೆಂದು ನಂಬುತ್ತಿದ್ದರು ಎಂದು ಊಹಿಸುವಂತಹ ಯಾವುದೇ ವಿಷಯವಿಲ್ಲ. ಅವರ ದೃಷ್ಟಿಯಲ್ಲಿ ಯೇಸು ಓರ್ವ ಮನುಷ್ಯನಾಗಿದ್ದರು. ದೇವರ ಆತ್ಮದಿಂದ ವಿಶಿಷ್ಟವಾಗಿ ಪ್ರಯೋಜನ ಪಡೆದಂತಹ ಮನುಷ್ಯ. ಅವರಿಗೆ ದೇವರೊಂದಿಗೆ ಎಂತಹ ಅಭೇದ್ಯ ನಂಟಿತ್ತೆಂದರೆ ಆ ಕಾರಣದಿಂದ ಅವರನ್ನು ದೇವಪುತ್ರನೆಂದು ಹೇಳಿದರೆ ತಪ್ಪಾಗಲಾರದು. ಸ್ವತಃ ಮತ್ತಾಯನು ಅವರನ್ನು ಬಡಗಿಯ ಪುತ್ರನೆಂದು ಹೇಳಿರುವನು. ಪಿತ್ರೋಸನು ಅವನನ್ನು ಕ್ರಿಸ್ತನೆಂದು ನಂಬಿದ ಬಳಿಕ ಅವರನ್ನು ಒತ್ತಟ್ಟಿಗೆ ಒಂದೆಡೆ ಕರೆದುಕೊಂಡು ಹೋಗಿ ಅವನನ್ನು ಆಕ್ಷೇಪಿಸಿದನು" **(ಮತ್ತಾಯ 16:22)** ಲೂಕನ ಸುವಾರ್ತೆಯಲ್ಲಿ ಉಲ್ಲೇಖವಾಗಿರುವಂತೆ ಶಿಲುಬೆಯ ಘಟನೆಯ ಬಳಿಕ ಯೇಸುವಿನ ಇಬ್ಬರು ಶಿಷ್ಯರು ಅಮಾವುಸ್‌ನ ಕಡೆಗೆ ಹೋಗುತ್ತಾ ಅವನ ಕುರಿತು ಈ ರೀತಿ ಪ್ರಸ್ತಾಪಿಸುತ್ತಾರೆ: "ಆತ ದೇವರು ಮತ್ತು ಇಡೀ ಜನಾಂಗದಲ್ಲಿ ಕೆಲಸ ಮತ್ತು ವಾಣಿಯ ಸಾಮರ್ಥ್ಯವಿರುವ ಪ್ರವಾದಿಯಾಗಿದ್ದನು." **(ಲೂಕನ ಸುವಾರ್ತೆ, 24:19)** ಗಮನಾರ್ಹವಾದ ಒಂದು ವಿಷಯ ವೆಂದರೆ ಮಾರ್ಕನ ಸುವಾರ್ತೆಯನ್ನು ಬರೆಯುವುದಕ್ಕೆ

ಮುಂಚೆ ಕ್ರೈಸ್ತರಲ್ಲಿ ಯೇಸುವಿಗೆ ಪ್ರಭು (Lord) ಎಂಬ ಪದವು ಸಾಮಾನ್ಯವಾಗಿ ಬಳಕೆಯಲ್ಲಿತ್ತು. ಆದರೆ ಮಾರ್ಕನ ಸುವಾರ್ತೆಯಲ್ಲಾಗಲೀ ಮತ್ತಾಯನ ಸುವಾರ್ತೆಯಲ್ಲಾಗಲೀ ಯೇಸುವಿಗೆ ಈ ಪದವನ್ನು ಬಳಸಲಾಗಿಲ್ಲ. ಬದಲಾಗಿ ಈ ಎರಡೂ ಪುಸ್ತಕಗಳಲ್ಲಿ ಈ ಪದವನ್ನು ದೇವರಿಗೆ ಧಾರಾಳವಾಗಿ ಬಳಸಲಾಗಿದೆ. ಯೇಸುವಿಗೆ ಎದುರಾದ ಸತ್ಯಪರೀಕ್ಷೆಗಳ ಕುರಿತು ಆ ಘಟನೆಗಳ ಮಹತ್ವಕ್ಕೆ ಅನುಗುಣವಾಗಿ ಈ ಮೂರೂ ಪುಸ್ತಕಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಆದರೆ ಮಾರ್ಕನ ಸುವಾರ್ತೆಯಲ್ಲಿ ಬರುವ 'ಪ್ರಾಯಶ್ಚಿತ್ತ' ಮತ್ತು ಕೊನೆಯ ಪೆಸಹ್ ಸಂದರ್ಭದಲ್ಲಿ ಕೆಲವು ಪದಗಳನ್ನು ಬಿಟ್ಟರೆ ಆ ಪುಸ್ತಕಗಳಲ್ಲಿ ಎಲ್ಲೂ ಈ ಘಟನೆಗೆ ಅನಂತರದ ಕಾಲದಲ್ಲಿ ನೀಡಲಾದಂತಹ ಅರ್ಥವನ್ನು ನೀಡಲಾಗಿರಲಿಲ್ಲ. ಯೇಸುವಿನ ಮರಣಕ್ಕೂ ಮಾನವರ ಪಾಪ ಮತ್ತು ಅದರ ಪರಿಹಾರಕ್ಕೂ ಏನಾದರೂ ಸಂಬಂಧವಿದೆಯೆಂಬ ಸೂಚನೆ ಕೂಡಾ ಎಲ್ಲೂ ಇಲ್ಲ."

ಮುಂದೆ ಅವರು ಹೀಗೆ ಬರೆದಿರುವರು:

"ಯೇಸು ತನ್ನನ್ನು ಓರ್ವ ಪ್ರವಾದಿಯೆಂಬ ನೆಲೆಯಲ್ಲಿ ಪ್ರಸ್ತುತ ಪಡಿಸುತ್ತಿದ್ದರೆಂಬುದು ಬೈಬಲ್‌ನ ಅನೇಕ ವಚನಗಳಿಂದ ವ್ಯಕ್ತವಾಗುತ್ತದೆ. ಉದಾ: ನನಗೆ ಇಂದು, ನಾಳೆ ಮತ್ತು ನಾಡಿದ್ದು ನನ್ನ ಮಾರ್ಗದಲ್ಲಿ ನಡೆಯಬೇಕಾಗಿದೆ. ಏಕೆಂದರೆ ಪ್ರವಾದಿಯು ಜೆರೂಸಲೇಮ್‌ನಿಂದ ಹೊರಗೆ ನಾಶ ಹೊಂದಲು ಸಾಧ್ಯವಿಲ್ಲ." (ಲೂಕನ ಸುವಾರ್ತೆ, 13-23) ಅನೇಕ ಸಲ ಅವರು ತನ್ನನ್ನು "ಆದಮರ ಪುತ್ರ" ಎಂದು ಕರೆದುಕೊಳ್ಳುತ್ತಾರೆ... ಯೇಸು ತನ್ನನ್ನು ಎಲ್ಲಿಯೂ 'ದೇವಪುತ್ರ'ನೆಂದು ಹೇಳಿಲ್ಲ. ಅವರ ಇತರ ಸಮಕಾಲೀನರು ಅವರ ಬಗ್ಗೆ ಈ ಪದವನ್ನು ಬಳಸುವಾಗ ಪ್ರಾಯಶಃ ದೇವರಿಂದ ಸ್ಪರ್ಶಿಸಲ್ಪಟ್ಟವರು ಎಂಬ ಅರ್ಥದಲ್ಲೇ ಬಳಸುತ್ತಿದ್ದರು. ಆದರೆ ಅವರು ತನ್ನನ್ನು ಪುತ್ರನೆಂದು ಸ್ಪಷ್ಟವಾಗಿ ಹೇಳುತ್ತಾರೆ... ಮಾತ್ರವಲ್ಲದೆ ತನ್ನ ಸಂಬಂಧ ವನ್ನು ಹೇಳಲು ತಂದೆಯೆಂಬ ಪದವನ್ನು ಅನ್ವಯಾರ್ಥಕವಾಗಿ ಉಪಯೋಗಿಸುತ್ತಾರೆ... ಆದರೆ ದೇವನೊಂದಿಗೆ ಈ ಸಂಬಂಧ ಇರುವವನು ತಾನೊಬ್ಬನೇ ಎಂದು ಹೇಳುತ್ತಿರಲಿಲ್ಲ."

ಮುಂದುವರಿಯುತ್ತಾ ಚಾರ್ಲ್ಸ್ ಎಂಡರ್ಸನ್ ಸ್ಕಾಟ್ ಅವರು ಹೀಗೆ ಬರೆದಿರುವರು:

"ಪೆಂಟೆಕೋಸ್ಟ್ ಹಬ್ಬದ ಸಂದರ್ಭದಲ್ಲಿ ಪೀಟರ್‌ನು- "ಆತ ದೇವನ ವತಿಯಿಂದ ಬಂದ ಓರ್ವ ಮಾನವನಾಗಿದ್ದನು" ಎಂದು ಹೇಳಿದ ಮಾತು ಯೇಸುವನ್ನು ಅವರ ಸಮಕಾಲೀನರು ಏನೆಂದು ತಿಳಿದುಕೊಂಡಿದ್ದರೆಂಬುದನ್ನು ತೋರಿಸುತ್ತದೆ... ಬೈಬಲ್‌ನಿಂದ ನಮಗೆ ತಿಳಿದುಬರುವಂತೆ ಯೇಸು ಶೈಶವದಿಂದ ಯೌವನದ ತನಕ ಸಹಜವಾದ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಯ ಹಂತಗಳನ್ನು ದಾಟಿದ್ದರು. ಅವರಿಗೆ ಹಸಿವು-ಬಾಯಾರಿಕೆ ಯಾಗುತ್ತಿತ್ತು. ಅವರು ದಣಿಯುತ್ತಿದ್ದರು. ನಿದ್ರಿಸುತ್ತಿದ್ದರು. ಅವರು ಆಶ್ಚರ್ಯಗೊಳ್ಳು ತ್ತಿದ್ದರು. ಸ್ಥಿತಿಗತಿಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಅವರು ದುಃಖಗಳನ್ನು ಸಹಿಸಿದರು ಮತ್ತು ಮರಣ ಹೊಂದಿದರು. ತಾನು ಎಲ್ಲವನ್ನೂ ಆಲಿಸಬಲ್ಲವನೆಂದೋ ಎಲ್ಲವನ್ನೂ ನೋಡಬಲ್ಲವನೆಂದೋ ಅವರು ಎಂದೂ ವಾದಿಸಿರಲಿಲ್ಲ. ಬದಲಾಗಿ ಅದನ್ನು

ನಿರಾಕರಿಸುತ್ತಿದ್ದರು... ಅವರು ಸರ್ವವ್ಯಾಪಿ ಮತ್ತು ಸರ್ವವೀಕ್ಷಕರಾಗಿರುವರೆಂದು ವಾದಿಸುವುದು ಬೈಬಲ್‌ನಲ್ಲಿ ನಮಗೆ ಸಿಗುವಂತಹ ಕಲ್ಪನೆಗೆ ವಿರುದ್ಧವಾಗಿದೆ... ಯೇಸು ಈ ಎಲ್ಲ ಪರಿಸ್ಥಿತಿಯನ್ನು ಎದುರಿಸುವಾಗ ಅವರು ಮಾನವ ಜ್ಞಾನದ ಸೀಮಿತತೆಯನ್ನು ಹೊಂದಿದವ ರಾಗಿದ್ದರು. ಈ ಸೀಮಿತತೆಗೆ ಅಪವಾದವಿರುವುದಾದರೆ ಕೇವಲ ಪ್ರವಾದಿತ್ವದ ದೂರದರ್ಶಿತ್ವ ಮತ್ತು ದೇವರ ಖಚಿತ ದರ್ಶನಗಳ ಆಧಾರದಲ್ಲಿ ಮಾತ್ರ. ಅದೇ ರೀತಿ ಯೇಸುವನ್ನು ಸರ್ವಶಕ್ತನೆಂದು ನಂಬುವ ಅವಕಾಶ ಬೈಬಲ್‌ನಲ್ಲಿರುವುದು ಇನ್ನೂ ಕಡಿಮೆ. ಅವರು ದೇವರಿಂದ ನಿರಪೇಕ್ಷರಾಗಿ ಸ್ವಂತ ಅಧಿಕಾರದಿಂದ ಏನಾದರೂ ಕಾರ್ಯವೆಸಗಿದ ಕುರಿತು ಎಲ್ಲೂ ಯಾವುದೇ ಸೂಚನೆ ದೊರೆಯುವುದಿಲ್ಲ. ತದ್ವಿರುದ್ಧವಾಗಿ ಅವರು ಆಗಾಗ ಪ್ರಾರ್ಥಿಸುವ ಪರಿಪಾಠವಿಟ್ಟುಕೊಂಡಿದ್ದರು. "ಇದು ಪ್ರಾರ್ಥನೆಯ ಹೊರತು ಇನ್ನಾವ ರೀತಿಯಿಂದಲೂ ದೂರವಾಗದು" ಎಂಬಂತಹ ಮಾತುಗಳು ಅವರ ಅಸ್ತಿತ್ವವು ಅಲ್ಲಾಹನನ್ನು ಅವಲಂಬಿಸಿತ್ತೆಂಬುದರ ಸಂಕೇತವಾಗಿದೆ. ನಿಜವಾಗಿ ಇದು ಬೈಬಲ್ ಐತಿಹಾಸಿಕವಾಗಿ ನಂಬಲರ್ಹವಾಗಿದೆಯೆಂಬುದಕ್ಕೆ ಒಂದು ಸಾಕ್ಷಿಯಾಗಿದೆ. ಅದರ ರಚನೆ ಮತ್ತು ಕ್ರೋಢೀಕರಣವು ಕ್ರೈಸ್ತ ಚರ್ಚ್ ಯೇಸುವನ್ನು ದೇವರೆಂದು ಭಾವಿಸತೊಡಗುವುದಕ್ಕೆ ಮುಂಚೆ ಪೂರ್ಣ ಗೊಂಡಿರದಿದ್ದರೂ ಅದರಲ್ಲಿ ಯೇಸು ಮನುಷ್ಯರಾಗಿದ್ದರೆಂಬುದರ ಸಾಕ್ಷ್ಯಗಳಿವೆ. ಮಾತ್ರವಲ್ಲ, ಯೇಸು ತಮ್ಮನ್ನು ದೇವರೆಂದು ಬಗೆದಿದ್ದರು ಎಂದು ತಿಳಿಯ ಬಲ್ಲಂತಹ ಯಾವುದೇ ಸಾಕ್ಷ್ಯ ಅದರಲ್ಲಿಲ್ಲ.

ಅನಂತರ ರೆ ಸ್ಕಾಟ್ ಹೀಗೆ ಬರೆದಿರುವರು:

ಎತ್ತಿಕೊಳ್ಳುವ ಘಟನೆಯ ವೇಳೆ ಈ ಎತ್ತಿಕೊಳ್ಳುವ ಕ್ರಿಯೆಯ ಮೂಲಕ ಯೇಸು ಪೂರ್ಣಾಧಿಕಾರಗಳೊಂದಿಗೆ 'ದೇವಪುತ್ರ'ನ ಸ್ಥಾನದಲ್ಲಿ ಪ್ರತ್ಯಕ್ಷವಾಗಿ ಆರೂಢರಾದರು ಎಂದು ಸಂತ ಪೌಲ ಘೋಷಿಸಿದರು. ...ದೇವಪುತ್ರನೆಂಬ ಪದವು ಸ್ವಂತ ಪುತ್ರನಾಗಿರುವ ಕಡೆಗೆ ಸೂಚನೆಯಾಗಿದೆಯಾದರೂ ಸಂತ ಪೌಲನು ಯೇಸುವನ್ನು ಇನ್ನೊಂದು ಕಡೆ "ದೇವರ ಸ್ವಂತ ಪುತ್ರ" ಎಂದು ಹೇಳುವ ಮೂಲಕ ಇನ್ನಷ್ಟು ಸ್ಪಷ್ಟಪಡಿಸಿರುವನು. ಯೇಸುವಿಗೆ 'ದೇವರು' ಎಂಬ ಪ್ರಯೋಗವನ್ನು ಧಾರ್ಮಿಕ ಅರ್ಥದಲ್ಲಿ ಮೊಟ್ಟ ಮೊದಲು ಬಳಸಿದವರು ಆರಂಭದ ಕ್ರೈಸ್ತ ಸಮೂಹವಾಗಿತ್ತೋ ಅಥವಾ ಸಂತ ಪೌಲನಾಗಿದ್ದನೋ ಎಂಬುದನ್ನು ಈಗ ತೀರ್ಮಾನಿಸಲಾಗದು. ಪ್ರಾಯಶಃ ಇದು ಆರಂಭದ ಕ್ರೈಸ್ತರ ಕೃತ್ಯವೇ ಆಗಿರಬೇಕು. ಆದರೆ ಅದನ್ನು ಪೂರ್ಣಾರ್ಥದಲ್ಲಿ ಹೇಳಿದವನು ಪೌಲನಾಗಿದ್ದನೆಂಬುದರಲ್ಲಿ ಸಂಶಯವಿಲ್ಲ. ಅಲ್ಲದೆ ತನ್ನ ಇಂಗಿತವನ್ನು ಇನ್ನಷ್ಟು ಸ್ಪಷ್ಟಪಡಿಸಲಿಕ್ಕಾಗಿ "ದೇವರಾದ ಯೇಸುಕ್ರಿಸ್ತ"ನ ಕಡೆಗೆ ಪ್ರಾಚೀನ ದಿವ್ಯಗ್ರಂಥಗಳಲ್ಲಿ ಯಹೋವಾ(ಅಲ್ಲಾಹ್)ನಿಗೆ ಮಾತ್ರ ಬಳಸಲಾಗುತ್ತಿದ್ದಂತಹ ಅನೇಕ ಕಲ್ಪನೆಗಳನ್ನು ಮತ್ತು ಪಾರಿಭಾಷಿಕ ಪದಗಳನ್ನು ಅವರಿಗೆ ಅನ್ವಯಿಸತೊಡಗಿದ. ಜತೆಗೆ ಆತ ಕ್ರಿಸ್ತನನ್ನು ದೇವರ ಜ್ಞಾನ, ವಿವೇಕ ಮತ್ತು ಮಹಿಮೆಗೆ ಸಮಾನವೆಂದು ಸಾರಿದನು. ಸ್ಪಷ್ಟ ಅರ್ಥದಲ್ಲಿ ಅವರನ್ನು ದೇವಪುತ್ರನೆಂದನು. ವಿಭಿನ್ನ

ನೆಲೆಯಲ್ಲಿ ಮತ್ತು ವಿಭಿನ್ನ ದೃಷ್ಟಿಯಿಂದ ಕ್ರಿಸ್ತನನ್ನು ದೇವರಿಗೆ ಸಮಾನನೆಂದು ಸಾರಿದರೂ ಪೌಲನು ಸ್ಪಷ್ಟವಾಗಿ ಅವರೇ 'ಅಲ್ಲಾಹ್' ಎಂದು ಹೇಳುತ್ತಿರಲಿಲ್ಲ.

ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ ಕ್ರೈಸ್ತ ಧರ್ಮ (Christianity) ಎಂಬ ಇನ್ನೊಂದು ಲೇಖನದಲ್ಲಿ ರೆವರೆಂಡ್ ಜಾರ್ಜ್ ವಿಲಿಯಮ್ ನಾಕ್ಸ್ ಎಂಬವನು ಕ್ರೈಸ್ತ ಚರ್ಚ್‌ನ ಮೂಲ ನಂಬಿಕೆಯ ಕುರಿತು ಚರ್ಚಿಸುತ್ತಾ ಹೀಗೆ ಬರೆದಿರುವನು:

'ತ್ರಿಏಕತ್ವ'ದ ವೈಚಾರಿಕ ನೆಲೆಗಟ್ಟು ಗ್ರೀಕ್ ಮತ್ತು ಯಹೂದಿ ಬೋಧನೆಗಳಿಂದ ಬಂದಿದೆ. ಆದ್ದರಿಂದ ಇದು ನಮ್ಮ ಪಾಲಿಗೆ ಒಂದು ವಿಚಿತ್ರ ರೀತಿಯ ಮಿಶ್ರಣವಾಗಿದೆ. ಧಾರ್ಮಿಕ ವಿಚಾರಗಳು ಮತ್ತು ಒಂದು ಅಪರಿಚಿತ ತತ್ವಶಾಸ್ತ್ರದ ರೂಪದಲ್ಲಿ.

ತಂದೆ, ಮಗ ಮತ್ತು ಪವಿತ್ರಾತ್ಮ ಎಂಬ ಪಾರಿಭಾಷಿಕಗಳನ್ನು ಯಹೂದಿ ಮೂಲಗಳು ಒದಗಿಸಿವೆ. ಕೊನೆಯ ಪಾರಿಭಾಷಿಕವನ್ನು ಯೇಸು ಬಹಳ ಅಪರೂಪವಾಗಿ ಬಳಸಿದ್ದರು. ಅದನ್ನು ಬಳಸಿದ ಪೌಲನ ಬಳಿಯೂ ಅದರ ಸ್ಪಷ್ಟವಾದ ವಿವರಣೆಯಿರಲಿಲ್ಲ. ಆದರೆ ಯಹೂದಿ ಸಾಹಿತ್ಯದಲ್ಲಿ ಈ ಪಾರಿಭಾಷಿಕವು ಮೂರ್ತರೂಪ ತಾಳುವುದರಲ್ಲಿತ್ತು. ಆದ್ದರಿಂದ ಈ ನಂಬಿಕೆಯ ಮೂಲ ಯಹೂದಿಯಾಗಿದೆ. (ಈ ಮಿಶ್ರಣದಲ್ಲಿ ಶಾಮೀಲಾಗುವುದಕ್ಕೆ ಮುಂಚೆ ಅದು ಕೂಡಾ ಗ್ರೀಕ್‌ನ ಪ್ರಭಾವಕ್ಕೆ ಒಳಗಾಗಿತ್ತು) ಮತ್ತು ಸಮಸ್ಯೆ ಗ್ರೀಕ್ ಆಗಿದೆ. ಈ ನಂಬಿಕೆ ಯಾವುದೇ ನೈತಿಕ ಅಥವಾ ಧಾರ್ಮಿಕ ಪ್ರಶ್ನೆಯಿಂದ ಜನ್ಮ ತಾಳಿರಲಿಲ್ಲ. ಅದು ಸಂಪೂರ್ಣವಾಗಿ ಒಂದು ತತ್ವಶಾಸ್ತ್ರೀಯ ಪ್ರಶ್ನೆಯಾಗಿತ್ತು. ಅರ್ಥಾತ್ (ತಂದೆ, ಮಗ ಮತ್ತು ಪವಿತ್ರಾತ್ಮ) ಎಂಬ ಮೂರರ ಮಧ್ಯೆ ವಾಸ್ತವಿಕ ಸಂಬಂಧವೇನು? ಅದಕ್ಕೆ ಚರ್ಚ್ ನೀಡಿದ ಉತ್ತರವು ನೈಕಿಯಾದ ಪರಿಷತ್ತು ನಿರ್ಧರಿಸಿದ ವಿಶ್ವಾಸದಲ್ಲಿ ಉಲ್ಲೇಖಿತ ವಾಗಿದೆ. ಅದನ್ನು ನೋಡಿದರೆ ವ್ಯಕ್ತವಾಗುವುದೇನೆಂದರೆ ಅದು ತನ್ನೆಲ್ಲ ವೈಶಿಷ್ಟ್ಯಗಳಿಂದಾಗಿ ಗ್ರೀಕ್ ಚಿಂತನೆಯ ಮಾದರಿಯಾಗಿದೆ.

ಇಲ್ಲಿ ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ ಮತ್ತೊಂದು ಲೇಖನದಲ್ಲಿ ಕ್ರೈಸ್ತ ಚರ್ಚ್‌ನ ಇತಿಹಾಸದ (Church History) ಈ ಅಂಶವೂ ಉಲ್ಲೇಖನೀಯವಾಗಿದೆ:

ಕ್ರಿ.ಶ. ಮೂರನೆಯ ಶತಮಾನ ಕೊನೆಗೊಳ್ಳುವುದಕ್ಕೆ ಮುಂಚೆಯೇ ಕ್ರಿಸ್ತನನ್ನು ಸಾಮಾನ್ಯ ವಾಗಿ 'ದಿವ್ಯವಾಣಿ'ಯ ಶಾರೀರಿಕ ಆವಿಷ್ಕಾರವೆಂದು ಪರಿಗಣಿಸಲಾಗುತ್ತಿತ್ತು. ಆದರೆ ಕ್ರಿಸ್ತನ ದೇವತ್ವವನ್ನು ಒಪ್ಪದ ಅನೇಕ ಕ್ರೈಸ್ತರಿದ್ದರು. ನಾಲ್ಕನೆಯ ಶತಮಾನದಲ್ಲಿ ಈ ವಿಷಯದ ಬಗ್ಗೆ ತೀವ್ರ ಚರ್ಚೆಯಾಯಿತು. ಇದರಿಂದ ಚರ್ಚ್‌ನ ಆಧಾರವೇ ನಡುಗ ತೊಡಗಿತು. ಕೊನೆಗೆ ಕ್ರಿ.ಶ. 325ರಲ್ಲಿ ನಡೆದ ಧಾರ್ಮಿಕ ಪರಿಷತ್ತಿನಲ್ಲಿ ಕ್ರಿಸ್ತನ ದೇವತ್ವವನ್ನು ಅಧಿಕೃತ ಕ್ರೈಸ್ತ ವಿಶ್ವಾಸವೆಂದು ಸಾರಲಾಯಿತು. ವಿಶಿಷ್ಟ ಪದಗಳಲ್ಲಿ ಅದನ್ನು ಲಿಖಿತಗೊಳಿಸಲಾಯಿತು. ಅನಂತರವೂ ಕೆಲವು ಕಾಲದವರೆಗೆ ಜಗಳ ನಡೆಯುತ್ತಿತ್ತು. ಆದರೆ ಅಂತಿಮ ವಿಜಯ ಧಾರ್ಮಿಕ ಪರಿಷತ್ತಿನ ತೀರ್ಮಾನಕ್ಕೇ ಆಯಿತು. ಪೂರ್ವ ಪಶ್ಚಿಮಗಳಲ್ಲೆಲ್ಲಾ ಅದನ್ನು ಶ್ರದ್ಧಾವಂತ ಕ್ರೈಸ್ತರ ನೈಜ ವಿಶ್ವಾಸವೆಂದು ಅಂಗೀಕರಿಸಲಾಯಿತು.

ಮಗನ ದೇವತ್ವದ ಜತೆಗೆ ಆತ್ಮದ ದೇವತ್ವವನ್ನೂ ಅಂಗೀಕರಿಸಲಾಯಿತು. ಅದಕ್ಕೆ ಬಾಪ್ಟಿಸಂ ಮತ್ತು ಪ್ರಚಲಿತ ಧಾರ್ಮಿಕ ಸಂಕೇತಗಳಲ್ಲಿ ತಂದೆ ಮತ್ತು ಮಗನ ಜತೆಗೆ ಸ್ಥಾನ ನೀಡಲಾಯಿತು. ಈ ರೀತಿ ಧಾರ್ಮಿಕ ಪರಿಷತ್ತಿನಲ್ಲಿ ತ್ರಿಏಕತ್ವವು ಕ್ರೈಸ್ತ ಧರ್ಮ ವಿಶ್ವಾಸದ ಒಂದು ಅವಿಭಾಜ್ಯ ಅಂಗವೆಂದು ಪರಿಗಣಿಸಲ್ಪಟ್ಟಿತು.

"ಮಗನ ದೇವತ್ವವು ಕ್ರಿಸ್ತನ ವ್ಯಕ್ತಿತ್ವದಲ್ಲಿ ಶಾರೀರಿಕ ರೂಪ ಪಡೆದಿತ್ತು" ಎಂಬ ವಾದದ ಬಗ್ಗೆ ಇನ್ನೊಂದು ವಿವಾದ ಎದ್ದಿತು. ನಾಲ್ಕನೆಯ ಶತಮಾನ ಮತ್ತು ನಂತರ ದೀರ್ಘಕಾಲದ ವರೆಗೆ ಇದರ ಬಗ್ಗೆ ವಾದ-ವಿವಾದಗಳು ನಡೆಯುತ್ತಿದ್ದುವು. ಕ್ರಿಸ್ತನ ವ್ಯಕ್ತಿತ್ವದಲ್ಲಿ ದೇವತ್ವ ಮತ್ತು ಮನುಷ್ಯತ್ವದ ಮಧ್ಯೆ ಯಾವ ಸಂಬಂಧವಿದೆ? ಕ್ರಿ.ಶ. 451ರಲ್ಲಿ ಲೀಸ್ಡನ್‌ನ ಪರಿಷತ್ತು ಈ ವಿಷಯದ ಇತ್ಯರ್ಥ ಮಾಡಿತು. ಕ್ರಿಸ್ತನ ಅಸ್ತಿತ್ವದಲ್ಲಿ ಎರಡು ಪರಿಪೂರ್ಣ ಮೈಗಳು ಒಟ್ಟಾಗಿವೆ. ಒಂದು ದೈವಿಕ ಮೈ. ಇನ್ನೊಂದು ಮಾನವ ಮೈ. ಎರಡೂ ಒಟ್ಟುಗೂಡಿದ ಬಳಿಕವೂ ತನ್ನ ಪ್ರತ್ಯೇಕ ವೈಶಿಷ್ಟ್ಯಗಳನ್ನು ಏನೇನೂ ವ್ಯತ್ಯಾಸವಿಲ್ಲದೆ ಉಳಿಸಿಕೊಂಡಿದೆ. ಕಾನ್ಸ್‌ಟಾಂಟಿ ನೋಪಲ್‌ನಲ್ಲಿ ಕ್ರಿ.ಶ. 680ರಲ್ಲಿ ನಡೆದ ಮೂರನೆಯ ಪರಿಷತ್ತು ಇದರಲ್ಲಿ ಸ್ವಲ್ಪ ಹೆಚ್ಚಳ ಮಾಡಿತು. ಈ ಎರಡೂ ಮೈಗಳಿಗೆ ಭಿನ್ನ ಭಿನ್ನ ವಿಧಿಗಳಿವೆ. ಅರ್ಥಾತ್ ಕ್ರಿಸ್ತನು ಏಕಕಾಲದಲ್ಲಿ ಎರಡು ವಿಭಿನ್ನ ವಿಧಿಗಳನ್ನು ಹೊಂದಿರುವರು... ಇದೇ ವೇಳೆ ಪಾಶ್ಚಾತ್ಯ ಚರ್ಚ್ ಪಾಪ ಮತ್ತು ಪುಣ್ಯದ ಬಗ್ಗೆ ವಿಶೇಷ ಗಮನ ಹರಿಸಿತು. ಮೋಕ್ಷದ ವಿಷಯದಲ್ಲಿ ದೇವರ ಕೆಲಸ ಏನು ಮತ್ತು ಮನುಷ್ಯನ ಕೆಲಸವೇನು? ಎಂಬ ಪ್ರಶ್ನೆಯು ಅನೇಕ ಕಾಲದ ತನಕ ಚರ್ಚಾ ವಿಷಯವಾಗಿತ್ತು. ಕೊನೆಗೆ ಕ್ರಿ.ಶ. 529ರಲ್ಲಿ ಆರೆಂಜ್‌ನಲ್ಲಿ ನಡೆದ ಎರಡನೆಯ ಪರಿಷತ್ತಿನಲ್ಲಿ... ಆದಮರನ್ನು ಸ್ವರ್ಗದಿಂದ ಹೊರಹಾಕಿದ ಕಾರಣದಿಂದ ಯಾವ ಮನುಷ್ಯನೂ ಮುಕ್ತಿಯೆಡೆಗೆ ಯಾವ ಹೆಜ್ಜೆಯನ್ನಿಡಲೂ ಸಮರ್ಥನಲ್ಲ. ಅದನ್ನು ದೇವರು 'ಜ್ಞಾನಸ್ನಾನ'ದ ಮೂಲಕ ನೀಡಿದ ಒಂದು ಅನುಗ್ರಹದ ಮೂಲಕ ಹೊಸ ಜೀವನವನ್ನು ಪಡೆದು ಸಾಧಿಸಬಹುದು. ಈ ಹೊಸ ಜೀವನ ಪಡೆದ ಬಳಿಕವೂ ಅವನಿಗೆ ಪುಣ್ಯದಲ್ಲಿ ಸ್ಥಿರತೆ ಸಿಗಲಾರದು. ಅದು ಸಿಗಬೇಕಾದರೆ ದೇವರ ಆ ಅನುಗ್ರಹವು ಶಾಶ್ವತವಾಗಿ ಅವನಿಗೆ ನೆರವಾಗಬೇಕು. ದೇವರ ಅನುಗ್ರಹದ ಈ ಶಾಶ್ವತ ನೆರವು ಅವನಿಗೆ ಕ್ಯಾಥೋಲಿಕ್ ಚರ್ಚ್‌ನ ಮೂಲಕವೇ ಲಭಿಸಬಲ್ಲುದು."

ಕ್ರೈಸ್ತ ವಿದ್ವಾಂಸರ ಈ ಹೇಳಿಕೆಗಳಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ಮೊದ ಮೊದಲು ಕ್ರೈಸ್ತರನ್ನು ದಾರಿಗೆಡಿಸಿದ್ದು ಶ್ರದ್ಧೆ ಮತ್ತು ಪ್ರೀತಿಯ ಅತಿರೇಕವಾಗಿದೆ. ಇದೇ ಅತಿರೇಕದ ಕಾರಣ ಅವರು ಈಸಾ(ಅ) ಅವರಿಗೆ ದೇವರು ಮತ್ತು ದೇವಪುತ್ರ ಎಂಬ ಪದಗಳನ್ನು ಬಳಸತೊಡಗಿದರು. ದೈವಿಕ ಗುಣಗಳನ್ನು ಅವರಿಗೆ ಆರೋಪಿಸಿದರು. ಪ್ರಾಯಶ್ಚಿತ್ತದ ನಂಬಿಕೆಯನ್ನು ಹುಟ್ಟು ಹಾಕಿದರು. ವಾಸ್ತವದಲ್ಲಿ ಈಸಾ(ಅ) ಅವರ ಬೋಧನೆಗಳಲ್ಲಿ ಈ ವಿಶ್ವಾಸಗಳಿಗೆ ಯಾವುದೇ ಆಸ್ಪದವಿರಲಿಲ್ಲ. ಅನಂತರ ಕ್ರೈಸ್ತರಿಗೆ ತತ್ವಜ್ಞಾನದ ಗಾಳಿ ಸೋಂಕಿತು. ಆದರೆ ಅವರು ಅದರಿಂದ ತಮ್ಮ ಹಿಂದಿನ ಪ್ರಮಾದವನ್ನು ಅರಿತು ತಿದ್ದಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಬದಲಾಗಿ ಅವರು ತಮ್ಮ ಪೂರ್ವಜರ

ಪ್ರಮಾದಗಳನ್ನು ಸಮರ್ಥಿಸಲು ವಿಧ ವಿಧದ ವಿವರಣೆಗಳನ್ನು ನೀಡಲಾರಂಭಿಸಿದರು. ಈಸಾ(ಅ) ಅವರ ಮೂಲ ಬೋಧನೆಗಳ ಕಡೆಗೆ ಮರಳುವ ಬದಲು ತರ್ಕಶಾಸ್ತ್ರ ಮತ್ತು ಮೀಮಾಂಸೆಯ ನೆರವಿನಿಂದ ಹೊಸ ಹೊಸ ನಂಬಿಕೆಗಳನ್ನು ಆವಿಷ್ಕರಿಸುತ್ತಾ ಸಾಗಿದರು.

## ಪ್ರವಾದಿ ಮುಹಮ್ಮದ್‌ರ(ಸ) ಆಗಮನದ ಕುರಿತು ಈಸಾರ(ಅ) ಭವಿಷ್ಯ ನುಡಿ

ಪ್ರವಾದಿ ಮುಹಮ್ಮದ್(ಸ) ಅವರ ಆಗಮನದ ಕುರಿತು ಪ್ರವಾದಿ ಈಸಾ(ಅ) ಅವರು ಸ್ಪಷ್ಟವಾಗಿ ಭವಿಷ್ಯ ನುಡಿದಿದ್ದರೆಂದು ಪವಿತ್ರ ಕುರ್‌ಆನ್ ಹೇಳುತ್ತದೆ:

**"ಮತ್ತು ಮರ್ಯಮರ ಪುತ್ರ ಈಸಾ ಹೇಳಿದ ಮಾತನ್ನು ಸ್ಮರಿಸಿರಿ, ಬನೀಇಸ್ರಾಈಲರೇ, ನಾನು ನಿಮ್ಮ ಕಡೆಗೆ ಅಲ್ಲಾಹನಿಂದ ಕಳುಹಿಸಲ್ಪಟ್ಟ ಸಂದೇಶವಾಹಕನಾಗಿರುತ್ತೇನೆ. ನಾನು, ನನಗಿಂತ ಮೊದಲು ಬಂದಿರುವ ತೌರಾತನ್ನು ದೃಢೀಕರಿಸುವವನು ಮತ್ತು ನನ್ನ ಬಳಿಕ ಬರಲಿರುವ ಅಹ್ಮದ್ ಎಂಬ ಹೆಸರಿನ ರಸೂಲರ ಕುರಿತು ಸುವಾರ್ತೆ ನೀಡುವವನಾಗಿದ್ದೇನೆ."**

**(61:6)**

ಯೇಸುವಿನ ಆಗಮನದ ವೇಳೆ ಇಸ್ರಾಈಲ್ ಸಂತತಿಗಳು ಮೂವರು ವ್ಯಕ್ತಿಗಳನ್ನು ನಿರೀಕ್ಷಿಸುತ್ತಿದ್ದರು. 1) ಯೇಸು 2) ಏಲಿಯಾ (ಅರ್ಥಾತ್ ಪ್ರವಾದಿ ಇಲ್ಯಾಸ್ ಅವರ ಪುನರಾಗಮನ) 3) 'ಆ ಪ್ರವಾದಿ.'

"ಯೋಹಾನನು ಕೊಟ್ಟ ಸಾಕ್ಷಿ ಏನೆಂದರೆ- ಯಹೂದಿಯರು ಜೆರೂಸಲೇಮಿನಿಂದ ಯಾಜಕರನ್ನೂ ಲೇವಿಯರನ್ನೂ ಅವನ ಬಳಿಗೆ ಕಳುಹಿಸಿ- ನೀನು ಯಾರೆಂದು ಕೇಳಿದ್ದಕ್ಕೆ ಅವನು ಮರೆ ಮಾಚದೆ- ನಾನು ಕ್ರಿಸ್ತನಲ್ಲವೆಂದು ಎಲ್ಲರ ಮುಂದೆ ಹೇಳಿದನು. ಹಾಗಾದರೆ ನೀನು ಯಾರು? ಏಲಿಯನೋ ಎಂದು ಅವರು ಕೇಳಲು 'ಅಲ್ಲ'ವೆಂದನು. ನೀನು ಬರಬೇಕಾದ ಆ ಪ್ರವಾದಿಯೇ? ಅಂದದ್ದಕ್ಕೂ 'ಅಲ್ಲ'ವೆಂದನು. ಆಗ ಅವರು ನೀನು ಯಾರು? ನಮ್ಮನ್ನು ಕಳುಹಿಸಿದವರಿಗೆ ನಾವು ಉತ್ತರ ಹೇಳಬೇಕಲ್ಲಾ, ನಿನ್ನ ವಿಷಯವಾಗಿ ಏನು ಹೇಳುತ್ತೀ ಎಂದು ಕೇಳಲು ಅವನು- ಕರ್ತನ ದಾರಿಯನ್ನು ನೆಟ್ಟಗೆ ಮಾಡಿರಿ ಎಂದು ಅಡವಿಯಲ್ಲಿ ಕೂಗುವವನ ಶಬ್ದವಿದೆ ಎಂಬುದಾಗಿ ಯೆಶಾಯ ಪ್ರವಾದಿಯು ಹೇಳಿದನಷ್ಟೆ. ಆ ಶಬ್ದವೇ ನಾನು ಎಂದು ಉತ್ತರಕೊಟ್ಟನು. ಬಂದಿದ್ದವರು ಫರಿಸಾಯರ ಕಡೆಯವರಾಗಿದ್ದು- ನೀನು ಕ್ರಿಸ್ತನೂ ಏಲಿಯನೂ ಆ ಪ್ರವಾದಿಯೂ ಅಲ್ಲವಾದರೆ ಸ್ನಾನ ಮಾಡಿಸುವುದೇನು?"

**(ಯೋಹಾನನ ಸುವಾರ್ತೆ, 1:19-25)**

ಇಸ್ರಾಈಲ್ ಜನಾಂಗದವರು ಹ.ಈಸಾ(ಅ) ಮತ್ತು ಹ.ಇಲ್ಯಾಸ್‌ರ ಹೊರತು ಇನ್ನೊಬ್ಬ ಪ್ರವಾದಿಯ ನಿರೀಕ್ಷೆಯಲ್ಲಿದ್ದರು ಮತ್ತು ಅವರು ಯಹ್ಯಾ(ಅ) ಆಗಿರಲಿಲ್ಲ ಎಂದು ಮೇಲಿನ ವಚನಗಳಿಂದ ಸ್ಪಷ್ಟವಾಗುತ್ತದೆ. 'ಆ ಪ್ರವಾದಿಯ' ಆಗಮನದ ನಂಬಿಕೆಯು ಇಸ್ರಾಈಲ್ ಜನಾಂಗದಲ್ಲಿ ಜನಜನಿತವಾಗಿತ್ತು. ಆದ್ದರಿಂದ ಕೇವಲ 'ಆ ಪ್ರವಾದಿ' ಎಂದರೆ ಅವರಿಗೆ ತಿಳಿದು ಬಿಡುತ್ತಿತ್ತು. 'ತೌರಾತ್'ನಲ್ಲಿ ಸುವಾರ್ತೆ ನೀಡಲಾಗಿರುವ 'ಆ ಪ್ರವಾದಿ' ಎಂದು ಹೇಳುವ ಅಗತ್ಯವೂ ಇರಲಿಲ್ಲ. 'ಆ ಪ್ರವಾದಿ' ಬರುವುದು ಅವರ

ಮಟ್ಟಿಗೆ ಖಚಿತವಾಗಿತ್ತು. ಯಹ್ಯಾ(ಅ) ಅವರಲ್ಲಿ ಈ ಪ್ರಶ್ನೆಗಳನ್ನು ಕೇಳಿದಾಗ ಅವರು ಇನ್ನು ಯಾವ ಪ್ರವಾದಿಯೂ ಬರಲಿಕ್ಕಿಲ್ಲವೆಂದು ಹೇಳಿ ನೀವು ಯಾವ ಪ್ರವಾದಿಯ ಕುರಿತು ಕೇಳುತ್ತಿರುವಿರೆಂದು ಹೇಳಿರಲಿಲ್ಲ.

ಇನ್ನು ಯೋಹಾನನ ಸುವಾರ್ತೆಯಲ್ಲಿ ಬಂದಿರುವ ಭವಿಷ್ಯನುಡಿಗಳ ಕುರಿತು ನೋಡೋಣ:

"ಆಗ ನಾನು ತಂದೆಯನ್ನು ಕೇಳಿಕೊಳ್ಳುವೆನು. ಆತನು ನಿಮಗೆ ಬೇರೊಬ್ಬ ಸಹಾಯಕನನ್ನು ಸದಾಕಾಲ ನಿಮ್ಮ ಸಂಗಡ ಇರುವುದಕ್ಕೆ ಕೊಡುವನು. 'ಆ ಸಹಾಯಕನು' ಯಾರೆಂದರೆ ಸತ್ಯದ ಆತ್ಮನೇ. ಲೋಕವು ಆತನನ್ನು ನೋಡದೆಯೂ ತಿಳಿಯದೆಯೂ ಇರುವುದರಿಂದ ಆತನನ್ನು ಹೊಂದಲಾರದು. ನೀವು ಆತನನ್ನು ಬಲ್ಲಿರಿ! ಹೇಗೆಂದರೆ ನಿಮ್ಮ ಬಳಿಯಲ್ಲಿ ವಾಸಮಾಡುತ್ತಾನೆ ಮತ್ತು ನಿಮ್ಮೊಳಗೆ ಇರುವನು."

**(ಯೋಹಾನನ ಸುವಾರ್ತೆ- 14:16-17)**

"ಈ ಮಾತುಗಳನ್ನು ನಾನು ಇನ್ನೂ ನಿಮ್ಮ ಬಳಿಯಲ್ಲಿರುವಾಗ ನಿಮಗೆ ಹೇಳಿದ್ದೇನೆ. ಆದರೆ 'ಆ ಸಹಾಯಕನು' ಅಂದರೆ ನನ್ನ ಹೆಸರಿನಲ್ಲಿ ತಂದೆಯು ಕಳುಹಿಸಿಕೊಡುವ ಪವಿತ್ರಾತ್ಮನೇ ನಿಮಗೆ ಎಲ್ಲವನ್ನೂ ಉಪದೇಶಿಸಿ ನಾನು ನಿಮಗೆ ಹೇಳಿದ್ದನ್ನೆಲ್ಲಾ ನಿಮ್ಮ ನೆನಪಿಗೆ ತರುವನು." **(ಯೋಹಾನನ ಸುವಾರ್ತೆ, 14:25-26)**

"ಇನ್ನು ನಾನು ನಿಮ್ಮ ಸಂಗಡ ಬಹಳ ಮಾತುಗಳನ್ನಾಡುವುದಿಲ್ಲ. ಯಾಕೆಂದರೆ ಇಹಲೋಕಾಧಿಪತಿಯು ಬರುತ್ತಾನೆ. ಅವನಿಗೆ ಸಂಬಂದಪಟ್ಟದ್ದು ಯಾವುದೊಂದೂ ನನ್ನಲ್ಲಿಲ್ಲ." **(ಯೋಹಾನನ ಸುವಾರ್ತೆ, 14:30)**

"ಆದರೆ ತಂದೆಯ ಬಳಿಯಿಂದ ನಾನು ನಿಮಗೆ ಕಳುಹಿಸಿಕೊಡುವ ಸಹಾಯಕನು, ಅಂದರೆ ತಂದೆಯ ಬಳಿಯಿಂದ ಹೊರಡುವ ಸತ್ಯದ ಆತ್ಮನು, ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿ ಹೇಳುವನು." **(ಯೋಹಾನನ ಸುವಾರ್ತೆ, 15:26)**

"ಆದರೂ ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ. ಕೇಳಿರಿ! ನಾನು ಹೋಗುವುದು ನಿಮಗೆ ಹಿತಕರವಾಗಿದೆ. ಹೇಗೆಂದರೆ ನಾನು ಹೋಗದಿದ್ದರೆ 'ಆ ಸಹಾಯಕನು' ನಿಮ್ಮ ಬಳಿಗೆ ಬರುವುದಿಲ್ಲ. ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳುಹಿಸಿಕೊಡುತ್ತೇನೆ."

**(ಯೋಹಾನನ ಸುವಾರ್ತೆ, 16:7)**

"ನಾನು ನಿಮಗೆ ಹೇಳಬೇಕಾದದ್ದು ಇನ್ನೂ ಬಹಳ ಉಂಟು; ಆದರೆ ಸದ್ಯಕ್ಕೆ ಅದನ್ನು ಹೊರಲಾರಿರಿ. ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನಡೆಸಿಕೊಂಡು ಹೋಗಿ ಸಕಲ ವಿಷಯದಲ್ಲಿಯೂ ಸತ್ಯಕ್ಕೆ ಸೇರಿಸುವನು. ಆತನು ತನ್ನಷ್ಟಕ್ಕೆ ತಾನೇ ಮಾತಾಡದೆ ಕೇಳಿದ ಮಾತುಗಳನ್ನೇ ಆಡುವನು ಮತ್ತು ಮುಂದಾಗುವ ಸಂಗತಿಗಳನ್ನು ನಿಮಗೆ ತಿಳಿಸುವನು. ಆತನು ನನ್ನದರೊಳಗಿಂದ ತೆಗೆದುಕೊಂಡು ನಿಮಗೆ ತಿಳಿಸುತ್ತಾ ನನ್ನನ್ನೇ ಮಹಿಮೆ ಪಡಿಸುವನು. ತಂದೆಗೆ ಇರುವುದೆಲ್ಲಾ ನನ್ನದು. ಆದ್ದರಿಂದಲೇ ನನ್ನದರೊಳಗಿಂದ ತೆಗೆದು ಕೊಂಡು ನಿಮಗೆ ತಿಳಿಸುವನೆಂದು ಹೇಳಿದೆನು." **(ಯೋಹಾನನ ಸುವಾರ್ತೆ, 16:12-15)**

ಈ ಭವಿಷ್ಯನುಡಿಗಳ ಅರ್ಥವನ್ನು ನಿರ್ಣಯಿಸುವುದಕ್ಕಿಂತ ಮುಂಚೆ ಒಂದು ವಿಷಯ ತಿಳಿದಿರಬೇಕು. ಈಸಾ(ಅ) ಮತ್ತು ಅವರ ಸಮಕಾಲೀನ ಫೆಲೆಸ್ತೀನ್ ನಿವಾಸಿಗಳ ಭಾಷೆ ಆರಾಮಿಕ್‌ನ (Aramic) ಆಡುಭಾಷೆಯಾದ ಸಿರಿಯಾಕ್ (Syriac) ಆಗಿತ್ತು. ಈಸಾ(ಅ) ಅವರ ಜನನಕ್ಕಿಂತ ಎರಡೂವರೆ ಶತಮಾನಗಳ ಹಿಂದೆಯೇ ಸೆಲೂಕಿಗಳ (Seleucide) ಆಡಳಿತ ಕಾಲದಲ್ಲಿಯೇ ಆ ಪ್ರದೇಶದಿಂದ ಹಿಬ್ರೂಭಾಷೆ ಅಳಿದು ಹೋಗಿ ಅದರ ಸ್ಥಾನವನ್ನು ಸಿರಿಯಾಕ್ ಭಾಷೆಯು ಪಡೆದಿತ್ತು. ಸೆಲೂಕಿ ಮತ್ತು ರೋಮನ್ ಸಾಮ್ರಾಜ್ಯಗಳ ಪ್ರಭಾವದಿಂದ ಗ್ರೀಕ್ ಭಾಷೆಯೂ ಈ ಪ್ರದೇಶಕ್ಕೆ ತಲುಪಿತ್ತು. ಆದರೆ ಅದು ಕೇವಲ ಆಡಳಿತ ವರ್ಗ ಮತ್ತು ಅವರ ನಿಕಟವರ್ತಿಗಳಿಗೆ ಸೀಮಿತವಾಗಿತ್ತು. ಸಾಮಾನ್ಯ ಜನರಿಗೆ ಆ ಭಾಷೆ ತಿಳಿದಿರಲಿಲ್ಲ. ಆದ್ದರಿಂದಲೇ ಕ್ರಿ.ಶ. 70ರಲ್ಲಿ ಜೆರೂಸಲೇಮ್ ಜಯಿಸಿದ ಬಳಿಕ ರೋಮನ್ ಸೇನಾಧಿಪತಿ ಟೈಟಸ್ (Titus) ಮಾಡಿದ ಗ್ರೀಕ್ ಭಾಷೆಯ ಭಾಷಣವನ್ನು ಸಿರಿಯಾಕ್ ಭಾಷೆಗೆ ಅನುವಾದಿಸಲಾಗಿತ್ತು. ಆದ್ದರಿಂದ ಈಸಾ(ಅ) ತಮ್ಮ ಶಿಷ್ಯರಿಗೆ ನೀಡಿದ ಬೋಧನೆಯು ಸಿರಿಯಾಕ್ ಭಾಷೆಯಲ್ಲೇ ಆಗಿರಬೇಕು.

ಇಲ್ಲಿ ತಿಳಿದುಕೊಳ್ಳಬೇಕಾದ ಇನ್ನೊಂದು ವಿಷಯವೇನೆಂದರೆ ಬೈಬಲ್‌ನ ನಾಲ್ಕು ಸುವಾರ್ತೆಗಳನ್ನೂ ಈಸಾ(ಅ) ಅವರು ಈ ಲೋಕದಿಂದ ನಿರ್ಗಮಿಸಿದ ಬಳಿಕ ಕ್ರೈಸ್ತ ಧರ್ಮ ವನ್ನು ಸ್ವೀಕರಿಸಿದ ಗ್ರೀಕ್ ಭಾಷೆ ಮಾತಾಡುವವರು ಬರೆದಿರುವರು. ಅವರಿಗೆ ಈಸಾ(ಅ) ಅವರ ವಚನಗಳು ಸಿರಿಯಾಕ್ ಭಾಷೆ ಮಾತಾಡುವ ಕ್ರೈಸ್ತರ ಮೂಲಕ ಬಾಯ್ದೆರೆಯಾಗಿ ತಲುಪಿತ್ತು. ಆ ಸಿರಿಯಾಕ್ ಭಾಷೆಯ ವಚನಗಳನ್ನು ಅವರು ತಮ್ಮ ಭಾಷೆಗೆ ಅನುವಾದಿಸಿದ್ದರು. ಈ ಪೈಕಿ ಯಾವ ಸುವಾರ್ತೆಯೂ ಕ್ರಿ.ಶ.70ಕ್ಕಿಂತ ಮುಂಚೆ ಲಿಖಿತಗೊಂಡಿರಲಿಲ್ಲ. ಯೋಹಾನನ ಸುವಾರ್ತೆಯಂತೂ ಈಸಾ(ಅ) ಅವರ ಒಂದು ಶತಮಾನದ ನಂತರ ಬರೆಯಲ್ಪಟ್ಟಿತು. ಮೂಲ ಗ್ರೀಕ್ ಭಾಷೆಯಲ್ಲಿ ಬರೆಯಲಾದ ಈ ಸುವಾರ್ತೆಗಳ ಯಾವುದೇ ಪ್ರತಿ ಸುರಕ್ಷಿತವಾಗಿಲ್ಲ. ಮುದ್ರಣ ಕಲೆ ಬಳಕೆಗೆ ಬರುವುದಕ್ಕಿಂತ ಮುಂಚೆ ವಿಭಿನ್ನ ಪ್ರದೇಶಗಳಲ್ಲಿ ಇದ್ದಂತಹ ಗ್ರೀಕ್ ಭಾಷೆಯ ಮೂಲ ಪ್ರತಿಗಳಾವುವೂ ನಾಲ್ಕನೆಯ ಶತಮಾನಕ್ಕಿಂತ ಹಿಂದಿನದ್ದಿಲ್ಲ. ಆದ್ದರಿಂದ ಮೂರು ಶತಮಾನಗಳಲ್ಲಿ ಅವುಗಳಲ್ಲಿ ಏನೆಲ್ಲಾ ಬದಲಾವಣೆಯಾಗಿದೆಯೆಂದು ಹೇಳುವಂತಿಲ್ಲ. ಈ ವಿಷಯ ಇನ್ನಷ್ಟು ಸಂಶಯಾಸ್ಪದ ವಾಗುವುದು ಹೇಗೆಂದರೆ ಕ್ರೈಸ್ತರು ತಮ್ಮ ಸುವಾರ್ತೆಗಳಲ್ಲಿ ತಿದ್ದುಪಡಿ-ಬದಲಾವಣೆಗಳನ್ನು ಮಾಡುವುದನ್ನು ಧರ್ಮಸಮ್ಮತವೆಂದು ಭಾವಿಸುತ್ತಾರೆ.

ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ (1946ರ ಆವೃತ್ತಿ) 'ಬೈಬಲ್' ಎಂಬ ಲೇಖನದಲ್ಲಿ ಹೀಗೆ ಹೇಳಲಾಗಿದೆ:

"ಸುವಾರ್ತೆಗಳಲ್ಲಿ ಉದ್ದೇಶಪೂರ್ವಕವಾಗಿ ಸ್ಪಷ್ಟ ಬದಲಾವಣೆಗಳನ್ನು ಮಾಡಲಾಗಿದೆ. ಉದಾ: ಕೆಲವು ವಚನಗಳನ್ನು ಇತರ ಮೂಲಗಳಿಂದ ತೆಗೆದು ಈ ಗ್ರಂಥದಲ್ಲಿ ಸೇರಿಸಲಾಗಿದೆ... ಈ ಬದಲಾವಣೆಗಳನ್ನು ಕೆಲವು ಮಂದಿ ಉದ್ದೇಶಪೂರ್ವಕವಾಗಿ

ಮಾಡಿರುವರು. ಅವರಿಗೆ ಈ ಗ್ರಂಥದಲ್ಲಿ ಸೇರಿಸಲಿಕ್ಕೆ ಎಲ್ಲಿಂದ ಯಾವುದೇ ವಿಷಯ ಸಿಕ್ಕಿದರೂ ಈ ಗ್ರಂಥವನ್ನು ಹೆಚ್ಚು ಉತ್ತಮ ಅಥವಾ ಹೆಚ್ಚು ಉಪಯುಕ್ತಪಡಿಸಲು ಅದರಲ್ಲಿ ತಮ್ಮ ಕಡೆಯಿಂದ ವಿಷಯಗಳನ್ನು ಸೇರಿಸುವುದು ತಮ್ಮ ಹಕ್ಕೆಂದು ಭಾವಿಸುತ್ತಿದ್ದರು... ಅನೇಕ ಸೇರ್ಪಡೆಗಳು ಎರಡನೆಯ ಶತಮಾನದಲ್ಲೇ ಆಗಿದ್ದುವು. ಅವುಗಳ ಮೂಲವೇನೆಂಬುದರ ಬಗ್ಗೆ ಏನೂ ತಿಳಿದಿಲ್ಲ."

ಇಂತಹ ಪರಿಸ್ಥಿತಿಯಲ್ಲಿ ಬೈಬಲ್‌ನಲ್ಲಿ ನಮಗೆ ಸಿಗುವ ಈಸಾ(ಅ) ಅವರ ವಚನಗಳು ಸರಿಯಾಗಿ ಉದ್ಧರಿಸಲ್ಪಟ್ಟಿವೆ ಮತ್ತು ಅವುಗಳಲ್ಲಿ ಯಾವುದೇ ತಿದ್ದುಪಡಿ ಮಾಗಿಲ್ಲವೆಂದು ಖಚಿತವಾಗಿ ಹೇಳುವುದು ಕಷ್ಟ.

ಮತ್ತೊಂದು ಮುಖ್ಯ ವಿಷಯವೇನೆಂದರೆ ಫೆಲೆಸ್ತೀನನ್ನು ಮುಸ್ಲಿಮರು ಜಯಿಸಿದ ಬಳಿಕವೂ ಸುಮಾರು ಮೂರು ಶತಮಾನಗಳ ತನಕ ಕ್ರೈಸ್ತರ ಭಾಷೆಯು ಸಿರಿಯಾಕ್ ಆಗಿತ್ತು. ಅದು ಒಂಬತ್ತನೆಯ ಶತಮಾನದಲ್ಲಿ ಅರಬಿ ಆಗಿ ಮಾರ್ಪಟ್ಟಿತು. ಸಿರಿಯಾಕ್ ಭಾಷೆ ಮಾತನಾಡುವ ಈ ಫೆಲೆಸ್ತೀನ್ ನಿವಾಸಿಗಳ ಮೂಲಕ ಕ್ರೈಸ್ತ ಪರಂಪರೆಯ ಕುರಿತು ಮೊದಲ ಮೂರು ಶತಮಾನಗಳ ಮುಸ್ಲಿಮ್ ವಿದ್ವಾಂಸರಿಗೆ ದೊರೆತ ಮಾಹಿತಿಗಳು ಖಂಡಿತವಾಗಿಯೂ ಸಿರಿಯಾಕ್‌ನಿಂದ ಗ್ರೀಕ್‌ಗೆ, ಗ್ರೀಕ್‌ನಿಂದ ಲ್ಯಾಟಿನ್‌ಗೆ ತರ್ಜುಮೆಯಾಗಿ ಬಂದ ಮಾಹಿತಿಗಳಿಗಿಂತ ಹೆಚ್ಚು ವಿಶ್ವಾಸಾರ್ಹವಾಗಿವೆ. ಏಕೆಂದರೆ ಪ್ರವಾದಿ ಈಸಾ(ಅ) ಅವರ ಬಾಯಿಯಿಂದ ಹೊರಟ ಮೂಲ ಸಿರಿಯಾಕ್ ಪದಗಳು ಅವರಲ್ಲಿ ಸುರಕ್ಷಿತವಿರುವ ಸಾಧ್ಯತೆಗಳು ಹೆಚ್ಚಾಗಿವೆ.

ಈ ಸ್ಪಷ್ಟ ಮತ್ತು ನಿರಾಕರಿಸಲಾಗದ ಐತಿಹಾಸಿಕ ಸತ್ಯಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ನೋಡಿದಾಗ ಯೋಹಾನನ ಸುವಾರ್ತೆಯಲ್ಲಿ ಬರುವ ಮೇಲ್ಕಾಣಿಸಿದ ವಚನಗಳಲ್ಲಿ ಈಸಾ(ಅ) ತಮ್ಮ ನಂತರ ಬರಲಿರುವ 'ಓರ್ವ ಪ್ರವಾದಿ'ಯ ಬಗ್ಗೆ ಭವಿಷ್ಯ ನುಡಿದಿರುವರು. ಅವರ ಕುರಿತು ಪ್ರವಾದಿ ಈಸಾ(ಅ) 'ಇಹಲೋಕಾಧಿಪತಿ' (ಲೋಕನಾಯಕ), "ಸದಾ ಕಾಲ ಇರುವವನು", "ಸಕಲ ವಿಷಯದಲ್ಲಿ ಸತ್ಯಕ್ಕೆ ಸೇರಿಸುವವನು" ಮತ್ತು ಸ್ವತಃ ಅವರ (ಈಸಾ) ಕುರಿತು 'ಸಾಕ್ಷಿ ಹೇಳುವವನು' ಎಂದು ಹೇಳಿರುವರು. ಯೋಹಾನನ ಸುವಾರ್ತೆಯ ಈ ವಚನಗಳಲ್ಲಿ 'ಪವಿತ್ರಾತ್ಮ', 'ಸತ್ಯದ ಆತ್ಮನು' ಇತ್ಯಾದಿ ಪದಗಳನ್ನು ಸೇರಿಸಿ ಅದರ ಉದ್ದೇಶವನ್ನು ವಿಕೃತಗೊಳಿಸಲು ಪ್ರಯತ್ನಿಸಲಾಗಿದ್ದರೂ ಈ ಎಲ್ಲ ವಚನಗಳನ್ನು ಗಮನವಿಟ್ಟು ಓದಿದಾಗ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಬರಲಿರುವ ಪ್ರವಾದಿಯು ಆತ್ಮವಲ್ಲ, ಮನುಷ್ಯ ಆಗಿರುವರು. ನಿರ್ದಿಷ್ಟ ವ್ಯಕ್ತಿಯಾಗಿರುವರು. ಅವರ ಶಿಕ್ಷಣವು ವಿಶ್ವವ್ಯಾಪಿ, ಸಮಗ್ರ ಮತ್ತು ಪ್ರಳಯ ಕಾಲದ ತನಕ ಉಳಿಯುವಂತಹದ್ದಾಗಿರುವುದು. ಈ ನಿರ್ದಿಷ್ಟ ವ್ಯಕ್ತಿಗೆ ಬೈಬಲ್‌ನ ಕನ್ನಡಾನುವಾದದಲ್ಲಿ 'ಸಹಾಯಕ' ಎಂಬ ಪದವನ್ನು ಬಳಸಲಾಗಿದೆ. ಗ್ರೀಕ್ ಭಾಷೆಯಲ್ಲಿ ಅದು ಪರಕ್ಲೆಟಸ್(Paracletus) ಆಗಿತ್ತು ಎಂದು ಕ್ರೈಸ್ತರು ಹೇಳುತ್ತಾರೆ. ಗ್ರೀಕ್ ಭಾಷೆಯಲ್ಲಿ ಆ ಪದವು ಮೂಲತಃ ಪರಕ್ಲೇಟ್ (Paraclate) ಆಗಿದೆ. ಅದರ ಅರ್ಥ ಯಾವುದೇ ಕಡೆಗೆ ಕರೆಯುವುದು, ಸಹಾಯಕ್ಕಾಗಿ ಕರೆ ನೀಡುವುದು,

ಎಚ್ಚರಿಕೆ, ಪ್ರೇರಣೆ, ವಿನಂತಿಸುವುದು, ಪ್ರಾರ್ಥಿಸುವುದು. ಬೈಬಲ್‌ನಲ್ಲಿ ಈ ಪದವನ್ನು ಎಲ್ಲೆಲ್ಲಿ ಬಳಸಲಾಗಿದೆಯೋ ಅಲ್ಲೆಲ್ಲೂ ಅದರ ಯಾವುದೇ ಅರ್ಥ ಅನ್ವಯವಾಗುವುದಿಲ್ಲ.

ಗ್ರೀಕ್ ಭಾಷೆಯಲ್ಲಿ ಪೆರಿಕ್ಲೈಟೋಸ್ (Periclytos) ಎಂಬ ಪದವೊಂದಿದೆ. ಅದರ ಅರ್ಥ ಸ್ತುತಿಸಲ್ಪಟ್ಟವನು. ಈ ಪದವು 'ಮುಹಮ್ಮದ್' ಎಂಬ ಅರಬಿ ಪದದ ಸಮಾನಾರ್ಥವಾಗಿದೆ. ಇದರ ಮತ್ತು ಪರಕ್ಲೆಟಸ್ (Paracletus)ನ ಉಚ್ಚಾರದಲ್ಲಿ ಬಹಳ ಸಾಮ್ಯತೆಯಿದೆ. ಇದು ಕೂಡಾ ಕ್ರೈಸ್ತ ವಿದ್ವಾಂಸರ ತಿದ್ದುಪಡಿಯ ಪರಿಣಾಮವಾಗಿದ್ದರೆ ಆಶ್ಚರ್ಯವಿಲ್ಲ. ಯೋಹಾನನು ಬರೆದ ಮೂಲ ಗ್ರೀಕ್ ಭಾಷೆಯ ಸುವಾರ್ತೆ ಎಲ್ಲೂ ಲಭ್ಯವಿಲ್ಲದಿರುವುದರಿಂದ ಅದನ್ನು ಪರೀಕ್ಷಿಸಲು ಸಾಧ್ಯವೂ ಇಲ್ಲ.

"ಆದರೆ ಪ್ರವಾದಿ ಈಸಾ(ಅ) ಅವರು ಬಳಸಿದ ಮೂಲ ಸಿರಿಯಾಕ್ ಭಾಷೆಯಲ್ಲಿ ಆ ಪದವು 'ಮುಸ್‌ಹಮನ್ನಾ' ಎಂದಾಗಿದ್ದು ಅದರ ಅರ್ಥ ಗ್ರೀಕ್ ಭಾಷೆಯಲ್ಲಿ ಪೆರಿಕ್ಲೀಟಸ್(Periclytos) (Pericly) ಮತ್ತು ಅರಬಿಯಲ್ಲಿ 'ಮುಹಮ್ಮದ್' ಆಗಿದೆ."

(ಇಬ್ನು ಹಿಶಾಮ್, ಭಾಗ: 1 ಪುಟ: 248)